# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ(ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದ್ಧಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದಿ ಇತ್ಯಾದಿ
ರಾತ್ರಿ 8–00 ರಿಂದ 12–00 ವರೆಗೆ ಪೂಲಂಗಿ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ರಿಂದ ಏಕಾಂತಸೇವೆ

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ
(25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು (ಏಕಾಂತ)
,, 5–00 ರಿಂದ 7–00 ವರೆಗೆ ಅಭಿಷೇಕ (ಅರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದಿ ಇತ್ಯಾದಿ
,, 8–00 ರಿಂದ 12–00 ವರೆಗೆ ಸರ್ವದರ್ಶನ
,, 12–00 ರಿಂದ 12–30 ವರೆಗೆ ಶುದ್ಧಿ
12–30 ಏಕಾಂತಸೇವೆ

---

ಗಮನಿಕೆ :— 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು.

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/– ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/– ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಮಂಗಳವಾರದಲ್ಲಿ ಪ್ಲವೋತ್ಸವ ಮಧ್ಯಾಹ 1–00 ರಿಂದ 7–00 ನಡುವೆ ಜರುಗುವುವು.



ಗೋವಿಂದ ಗೋವಿಂದ ಎನ್ನಲರಿಯದೆ ವೃಥಾ
ನೋವಿಂದ ಭಂಗಪಡುವುದುಚಿತವೆ ? ॥ಪ॥

ವೇದೋಕ್ತ ಪೂಜೆಯಲಿ ತೃಪ್ತಿಪಡಿಸದಿರೆ
ಆದುದೇನು ಅದರಿಂದ ಫಲವಾವುದು
ನಾದವ ಕೇಳ್ದ ಹರಿಣನಂತೆ ಕೆಡದೆ ಮಧು
ಸೂದನನ ನಾಮಸ್ಮರಣೆಯ ಮಾಡೊ ॥ ೧ ॥

ನಿಂದಾಪವಾದ ಘಟಿಸುವುದೈಸೆ ಇದರಿಂದ
ಮುಂದೆ ಮುಕ್ತಿಯು ನಿಮಗೆ ಸಾಧ್ಯವಹುದೆ
ತಂದೆ ಕಾಗಿ ನೆಲೆಯಾದಿ ಕೇಶವನ ನಾಮ
ಒಂದೇ ವೈಕುಂಠವನೈದಿಪುದಯ್ಯ ॥ ೨ ॥

—ಕನಕದಾಸರು

ಈ ಬಾರಿಯ ಬ್ರಹ್ಮೋತ್ಸವದಲ್ಲಿನ ಗರುಡೋತ್ಸವದ ಚಿತ್ರ.



ಗೌರವ ಸಂಪಾದಕರು ;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :
ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ ಪ್ರೆಸ್ ಕಾಂಪೌಂಡ್
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**



**ಸಂಪುಟ 12] ಸಪ್ತಗಿರಿ ನವಂಬರ್ 1981 [ಸಂಚಿಕೆ 6**

# ವಿಷಯಸೂಚಿ

ವಾರ್ತಾಪತ್ರಿ

## ಪಡಿಕಾವಲಿ ಗೋಪುರದ ಮಹಾಸಂಪ್ರೋಕ್ಷಣೆ

ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಪಡಿಕಾವಲಿ ಗೋಪುರವನ್ನು ಜೀರ್ಣೋದ್ಧಾರ ಮಾಡಿದ ನಂತರ ಈಚೆಗೆ ಅದರ ಮಹಾ ಸಂಪ್ರೋಕ್ಷಣೆ ನಡೆಯಿತು. ಈ ಗೋಪುರದ ಒಂಬತ್ತು ಕಲಶಗಳನ್ನು 6–58 ಲಕ್ಷರೂಗಳ ವೆಚ್ಚದಿಂದ ಚಿನ್ನದ ಗಿಲೀಟು ಮಾಡಲಾಗಿದೆ.

ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಂಗಾರದಬಾಗಿಲನ್ನು 6–58 ಲಕ್ಷರೂಗಳ ವೆಚ್ಚದಲ್ಲೂ, ಶ್ರೀ ಪದ್ಮಾವತೀ ಅಮ್ಮನವರ ದೇವಾಲಯದ ಬಂಗಾರದ ಬಾಗಿಲನ್ನು 2.97 ಲಕ್ಷ ರೂಗಳ ವೆಚ್ಚದಲ್ಲೂ ಬಂಗಾರದ ಗಿಲೀಟು ಮಾಡಿಸುವ ಕೆಲಸ ಮುಂದುವರಿದಿದೆಯೆಂದು ತಿಳಿದು ಬಂದಿದೆ.

ಮಹಾಸಂಪ್ರೋಕ್ಷಣಾ ಉತ್ಸವದಲ್ಲಿ ತಿ.ತಿ.ದೇ. ಕಾರ್ಯನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ, ತಿ. ತಿ. ದೇ. ಕಾರ್ಯನಿರ್ವಾಹಕ ಮಂಡಳಿಯ ಸದಸ್ಯ ಶ್ರೀ ಕೆ. ವೀರಾರೆಡ್ಡಿ, ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದ್, ಕಮೀಷನರ್ ಶ್ರೀ ಪಿ. ಎಸ್. ರಾಜಗೋಪಾಲರಾಜು ಅವರುಗಳು ಭಾಗ ವಹಿಸಿದರು.

## ಪುಷ್ಪಯಾಗ

1981 ನೇ ನವಂಬರ್ ತಿಂಗಳ 5ನೇ ತಾರೀಖಿನಂದು ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಸರ್ಕಾರ್ ಆರ್ಜಿತ ಪುಷ್ಪಯಾಗವನ್ನು ಮಾಡಲು ಯೋಜಿಸಲಾಗಿದೆ. ಹಾಗಾಗಿ ಅಂದು ಕಲ್ಯಾಣೋತ್ಸವ, ಡೋಲೋತ್ಸವ ಮೊದಲಾದ ಆರ್ಜಿತ ಸೇವೆಗಳನ್ನು ಮನ್ನಾ ಮಾಡಲಾಗಿದೆಯೆಂದು ವರದಿಯೊಂದು ತಿಳಿಸುತ್ತದೆ. ಆದರೆ 5000 ರೂಗಳ ಶುಲ್ಕ ನೀಡಿ ಪುಷ್ಪಯಾಗದಲ್ಲಿ ಗೃಹಸ್ಥರು ಭಾಗವಹಿಸಬಹುದೆಂದು ತಿಳಿಸಲಾಗಿದೆ.

**ದಿನಾಂಕ 29–9–81 ರಿಂದ ದಿನಾಂಕ 8–9–81 ವರೆಗೆ ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಗಳು ನಡೆದವು.**



ಬ್ರಹ್ಮೋತ್ಸವಗಳಲ್ಲಿನ ಆರಂಭದೆಸೆಯಾದ ಧ್ವಜಾರೋಹಣ ದೃಶ್ಯವನ್ನೂ ಕೊನೆಯದಾದ ಚಕ್ರಸ್ನಾನ ದೃಶ್ಯವನ್ನೂ ಈ ಎರಡು ಚಿತ್ರಗಳಲ್ಲಿ ಕಾಣಬಹುದು. ದಿನದಿನವೂ ಲಕ್ಷೋಪಲಕ್ಷ ಜನ ಭಾಗವಹಿಸಿ ಎಲ್ಲ ಉತ್ಸವಗಳನ್ನೂ ಯಶಸ್ವಿಗೊಳಿಸಿದ ಈ ಬ್ರಹ್ಮೋತ್ಸವ ಈ ಬಾರಿ ಹೊಸ ಹೊಸ ವಿಶೇಷಗಳಿಂದ ಕೂಡಿತ್ತು. (38–39 ನೇ ಪುಟವನ್ನೂ ನೋಡಿ)



ಸಂದರ್ಶಿಸಿ　　　　　　　　　　　　　　　　ಅನುಗ್ರಹೀತರಾಗಿರಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

## ಬ್ರಹ್ಮೋತ್ಸವಗಳು

**22—11—81 ರಿಂದ 1—12—81 ವರೆಗೆ**

28—11—81 ಶನಿವಾರ ಗರುಡೋತ್ಸವ.

30—11—81 ಸೋಮವಾರ ರಥೋತ್ಸವ.

ಆಸ್ತಿಕ ಭಕ್ತರು ಈ ಉತ್ಸವಗಳಲ್ಲಿ ಭಾಗವಹಿಸಿ ಅಮ್ಮನವರ ಅನುಗ್ರಹಕ್ಕೆ ಪಾತ್ರರಾಗಬೇಕೆಂದು ಕೋರಲಾಗಿದೆ.

**ತಿ. ತಿ. ದೇ.**

---

## ಸಪ್ತಗಿರಿ

## ಜಾಹೀರಾತು ದರಗಳು

| | |
|---|---|
| ಪೂರ್ತಿ ಪುಟ | ರೂ 500–00 |
| ಅರ್ಧಪುಟ | ರೂ 300–00 |
| ಕಾಲು ಪುಟ | ರೂ 150–00 |
| ಒಂದು ಕಾಲಂ | ರೂ 200–00 |

ಕೂಡಲೇ ಬರೆಯಿರಿ.

**ಸಂಪಾದಕರು, ಸಪ್ತಗಿರಿ**
**ತಿರುಪತಿ.**

---

# ಸಪ್ತಗಿರಿ ಯನ್ನು ಬೆಳೆಸಿರಿ

ಸನಾತನ ಧರ್ಮವನ್ನು ಹರಡಲು ಪರಿಶ್ರಮಿಸುತ್ತಿರುವ ಸಪ್ತಗಿರಿ ಮಾಸ ಪತ್ರಿಕೆ ಓದುಗರ ಸಂಪೂರ್ಣ ಸಹಕಾರದ ಅಗತ್ಯ ಹೊಂದಿದೆ. ನೀವು ಈ ಪತ್ರಿಕೆಯನ್ನು ನಿಮ್ಮ ಬಂಧುಗಳಿಗೆ, ಮಿತ್ರರಿಗೆ ನಿಮ್ಮ ಕಾಣಿಕೆಯಾಗಿ ನೀಡ ಬಹುದು. ಒಂದು ವರ್ಷದ ಚಂದಾ ಹಣವನ್ನು ನಮಗೆ ಕಳುಹಿಸಿ. ನಿಮ್ಮ ಪರವಾಗಿ ನೀವು ಹೆಸರಿಸುವವರಿಗೆ ಒಂದು ವರ್ಷ ಸಪ್ತಗಿರಿಯನ್ನು ಕಳುಹಿಸ ಲಾಗುತ್ತದೆ. ಕೆಳಗಣ ಕೂಪನ್ ಅನ್ನು ತುಂಬಿ ಹನ್ನೆರಡು ರೂಗಳ ಎಂ. ಓ. ಡಿ. ಡಿ. ಅನ್ನು ಕಳುಹಿಸಿರಿ.

---

ಮಾನ್ಯರೆ :

ಸಪ್ತಗಿರಿಯನ್ನು ಒಂದು ವರ್ಷ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿರಿ.

............ರೂಗಳ ಎಂ. ಓ/ ಡಿ. ಡಿ. ಕಳುಹಿಸಿದ್ದೇನೆ.

ಸಹಿ.

( ಬಿಡಿಬಿಡಿಯಾದ ದಪ್ಪ ಅಕ್ಷರದಲ್ಲಿ ಬರೆಯಿರಿ )

ಹೆಸರು ........................................

ವಿಳಾಸ ........................................

**ವೆಲ್‌ಫೇರ್ ಆಫೀಸರ್**
ಸೇಲ್ಸ್ ವಿಂಗ್
ತಿ. ತಿ. ದೇ. ಪ್ರೆಸ್ ಕಾಂಪೌಂಡ
ತಿರುಪತಿ. —ಇವರಿಗೆ.

## ನಮ್ಮ ದೇವಾಲಯಗಳು

# ಶ್ರೀನಿವಾಸ ಮಂಗಾಪುರ

ತಿರುಪತಿ ಪಟ್ಟಣಕ್ಕೆ ಸಮೀಪದಲ್ಲಿ ಎರಡು ಮಂಗಾಪುರಗಳು ಇವೆ. ಮೊದಲನೆಯದು ಎಲ್ಲರಿಗೂ ತಿಳಿದ ಅಲಮೇಲು ಮಂಗಾಪುರ. ಇದನ್ನೇ ತಿರುಚಾನೂರು, ಚಿರುತಾನೂರು, ತಿರುಶುಕನ'ಪೂರ್, ವಾದಿರಾಜಪುರ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಈ ಅಲಮೇಲು ಮಂಗಾಪುರದಲ್ಲಿ ಅನೇಕಾನೇಕ ದೇವಸ್ಥಾನಗಳಿದ್ದರೂ ಪ್ರಧಾನ ದೇವತೆ ಅಲಮೇಲು ಮಂಗಮ್ಮನೇ. 'ಅಲಮೇಲುಮಂಗಮ್ಮ' ಎನ್ನುವುದು ತಮಿಳು ಪದಗಳ ಸಮಾಸ. 'ಅಲರ್' ಎಂದರೆ ತಾವರೆ. 'ಮೇಲ್' ಎಂದರೆ ಮೇಲೆ. ಮಂಗೈ ಎಂದರೆ ವನಿತೆ. ಪದ್ಮದ ಮೇಲಿರುವವನಿತೆ ಪದ್ಮಾವತಿ. ತಿರುಪತಿ ಯಾತ್ರೆಯಲ್ಲಿ ಬೆಟ್ಟದ ಮೇಲೆ ಸ್ವಾಮಿಪುಷ್ಕರಿಣಿ ತೀರದಲ್ಲಿರುವ ವರಾಹ ಸ್ವಾಮಿಯನ್ನು ದರ್ಶನ ಮಾಡಿಕೊಳ್ಳುವುದು ಪ್ರಥಮ ಘಟ್ಟ. ಬಾಲಾಜಿಯನ್ನು ಸೇವಿಸುವುದು ದ್ವಿತೀಯ ಘಟ್ಟ. ತಿರುಚಾನೂರಿನಲ್ಲಿರುವ ತಾಯಾರನ್ನು ಪೂಜೆಮಾಡುವುದು ತೃತೀಯ ಘಟ್ಟ. ಈ ಮಂಗಾಪುರವನ್ನು ಕುರಿತು ವಿಶೇಷವಾಗಿ ಪರಿಚಯಮಾಡಿಕೊಡಬೇಕಾಗಿಲ್ಲ.

ತಿರುಪತಿಗೆ ಸುಮಾರು ಏಳು ಮೈಲು ದೂರದಲ್ಲಿ ತಿರುಪತಿ – ಮದನಪಲ್ಲಿ ದಾರಿಯಲ್ಲಿ ಮತ್ತೊಂದು ಮಂಗಾಪುರ ಇದೆ. ಇದನ್ನೇ ಈಗ 'ಶ್ರೀನಿವಾಸಮಂಗಾಪುರ' ಎನ್ನುವರು. ಚಂದ್ರಗಿರಿಯಿಂದ ತಿರುಮಲೆ ಬೆಟ್ಟಕ್ಕೆ ಹತ್ತುವ ದಾರಿಯಲ್ಲಿ ಇರುವ ಪ್ರಸಿದ್ಧ ಕ್ಷೇತ್ರ ಈ ಮಂಗಾಪುರ. ಅಲಮೇಲು ಮಂಗಾಪುರಕ್ಕಿಂತಲೂ ಇದು ಪ್ರಾಚೀನವಾದ ಕ್ಷೇತ್ರವೆಂದು ಕೆಲವರ ಮತ. ಇಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಬೆಟ್ಟದ ದೇವರಂತೆ ನಿಂತು ವರಗಳನ್ನು ಕೊಡುತ್ತಿದ್ದಾನೆ. ತಿರುಪತಿಯಲ್ಲಿರುವ ಸ್ವಾಮಿ ಸ್ವಯಂಭೂ ವಿಗ್ರಹವಾದರೆ ಇಲ್ಲಿರುವ ಸ್ವಾಮಿ ಪ್ರತಿಷ್ಠಾಮೂರ್ತಿ. ಪುರಂದರದಾಸರು ವರ್ಣಿಸಿದ "ಕೋಟಿಸೂರ್ಯ ಪ್ರಕಾಶವೆನಿಪ ಕಿರೀಟ, ನೋಟಕಾಶ್ಚರ್ಯವೆನಿಪ ನಗೆಮುಖ, ನೊಸಲೊಳಗೆ ತಿರುಮಣಿ" ಇವೆಲ್ಲವನ್ನೂ ಶ್ರೀನಿವಾಸಮಂಗಾಪುರದ ದಿವ್ಯಮೂರ್ತಿಯಲ್ಲಿ ನೋಡಬಹುದು. ಬೆಟ್ಟದ ಮೇಲಿರುವ ವಿಗ್ರಹಕ್ಕಿಂತಲೂ ಈ ವಿಗ್ರಹ ಉನ್ನತವಾದದ್ದು. ಆದರೆ ಈ ವಿಗ್ರಹಕ್ಕೆ ಮಕರತೋರಣವು ಇಲ್ಲ. ಈ ಗ್ರಾಮದ ಬದಿಯಲ್ಲಿ 'ವಿಕಲ್ಯ' ಎನ್ನುವ ಹೆಸರಿನ ನದಿ ಪ್ರವಹಿಸುತ್ತದೆ. ಇದಕ್ಕೆ 'ಕಲ್ಯಾಣಿ' ಎಂದು ಮತ್ತೊಂದು ಹೆಸರಿದೆ. ಕಲ್ಯಾಣಿ ಸುವರ್ಣಮುಖಿಗೆ ಉಪನದಿ. ಕಲ್ಯಾಣೀ ನದೀತೀರದಲ್ಲಿರುವ ಸ್ವಾಮಿಯಾದ್ದರಿಂದ ಕಲ್ಯಾಣ ವೆಂಕಟೇಶ್ವರ ಸ್ವಾಮಿ.

ಸ್ಕಾಂದ ಪುರಾಣದಲ್ಲಿ ವಿಕಲ್ಯಾನದಿ ಪ್ರಸ್ತಾವನೆ ಉಂಟು. ಆದರಂತೆ ವಿಕಲ್ಯಾನದಿ ಪ್ರಕೃತಿ ಸೌಂದರ್ಯಕ್ಕೆ ಹೆಸರಾದದ್ದು. ಅಪ್ಸರೆಯರನ್ನೂ ಸ್ನಾನಕ್ಕೆ ಆಕರ್ಷಿಸುವಷ್ಟು ಸುಂದರವಾಗಿ ತಂಪಾಗಿದ್ದು ಯಜ್ಞಯಾಗಾದಿಗಳಿಂದ ಪವಿತ್ರವಾದದ್ದು.

'ನಾರಾಯಣವರ'ದಲ್ಲಿ ವೆಂಕಟರಮಣಸ್ವಾಮಿ ಮದುವೆ ಮಾಡಿಕೊಂಡು 'ತೊಂಡವಾಡಕ್ಕೆ' ಸತೀ ಸಮೇತರಾಗಿ ಬಂದನಂತೆ. ಅಲ್ಲಿ ಅಗಸ್ತ್ಯಮಹರ್ಷಿ ಇದ್ದರು. ಅವರಿಗೆ ವೆಂಕಟರಮಣಸ್ವಾಮಿ ಸತೀ ಸಮೇತನಾಗಿ ನಮಸ್ಕರಿಸಿದನು. ಹಸಿರು ಬಟ್ಟೆಗಳಿಂದ ನೂತನ ವಧೂವರರು ಬೆಟ್ಟ ಹತ್ತಬಾರದೆಂದು ಅವರು ಹೇಳಿದರು. ಮುನೀಶ್ವರರ ಮಾತುಗಳನ್ನು ಮನ್ನಿಸಿ ಸ್ವಾಮಿ ಆರುತಿಂಗಳುಕಾಲ ವಿಕಲ್ಯಾನದೀತೀರದಲ್ಲಿ ಇದ್ದನೆಂದು ಐತಿಹ್ಯ. ಆದ್ದರಿಂದ ಇಲ್ಲಿ ಒಂದು ದೇವಸ್ಥಾನ ಪ್ರಕಾಶಮಾನವಾಯಿತು.

ಮನುಷ್ಯರ ಜೀವನದಲ್ಲಿ ವೃದ್ಧಿಕ್ಷಯಗಳು ಉಂಟು. ಈ ವಿಗ್ರಹ ಮಾನವಪ್ರತಿಷ್ಠೆಯಾದ್ದರಿಂದ ಈ ದೇವಸ್ಥಾನದ ಚರಿತ್ರೆಯಲ್ಲಿಯೂ ಔನ್ನತ್ಯಗಳು, ಪತನಗಳೂ ಕಾಣಿಸುತ್ತವೆ. ಈ ಗ್ರಾಮಕ್ಕೆ ಹಳೆಯ ಹೆಸರು ಸಿದ್ಧಕುಟ್ಟೆ. ತಿರುಮಲೆ ತಿರುಪತಿ ದೇವಸ್ಥಾನ ಶಾಸನಗಳಲ್ಲಿ ಈ ಊರಿನ ಪ್ರಸ್ತಾವನೆಯಿದೆ. ಇಲ್ಲಿ ಇಪ್ಪತ್ತುನಾಲ್ಕು ವೇದ ಪಂಡಿತರು ಇದ್ದರು. ಅವರು ಪ್ರತಿದಿನ ತಿರುಮಲೆಗೆ ಹೋಗಿ ವೇದಪಾರಾಯಣ ಮಾಡುತ್ತಿದ್ದರು.

ಡಾ॥ ಕೆ. ಸರ್ವೋತ್ತಮನ್.



ಶ್ರೀನಿವಾಸ ಮಂಗಾಪುರದ ಕಲ್ಯಾಣ ವೆಂಕಟೇಶ್ವರಸ್ವಾಮಿ ದೇವಾಲಯದ ಹೊರನೋಟ.



ಹೊಸದಾಗಿ ಸ್ಥಾಪಿತವಾದ ಧ್ವಜಸ್ತಂಭ

ಬೆಟ್ಟದ ಮೇಲೆ ದುಷ್ಟಜಂತುಗಳ ಸಂಚಾರವಿದ್ದ ಕಾರಣದಿಂದ ಅವರು ಅನುದಿನ ಹೋಗಿ ಬರುತ್ತಿದ್ದರು. ಒಂದು ಸಲ ವಿಕಲ್ಯಾನದಿಗೆ ಹುಚ್ಚು ಹೊಳೆ ಬಂದ ಕಾರಣ ದೇವಾಲಯದ ಪಕ್ಕದ ಹೊಲಗಳು ನಾಶವಾದವು. ಅಲ್ಲಿದ್ದ ಜನರು ಶ್ರೀನಿವಾಸಮಂಗಾಪುರವನ್ನು ಬಿಟ್ಟು ಸುರಕ್ಷಿತ ಸ್ಥಳದಲ್ಲಿ ನಿವಾಸಮಾಡಿಕೊಂಡರು. ಪೂಜೆಯಿಲ್ಲದೆ ರಕ್ಷಣೆಯಿಲ್ಲದೆ ದೇವಾಲಯವು ಶಿಥಿಲವಾಯಿತು.

ಶ್ರೀನಿವಾಸಮಂಗಾಪುರಕ್ಕೆ ಎರಡನೆಯ ಹೆಸರು ಅಲಮೇಲುಮಂಗಾಪುರ. ಶಿಥಿಲವಾದ ಈ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದ ಕೀರ್ತಿ ತಾಳ್ಲಪಾಕ ಚಿನ ತಿರುಮಲಾಚಾರ್ಯನಿಗೆ ಸಲ್ಲುತ್ತದೆ. ತೆಲುಗಿನಲ್ಲಿ, 'ಪದಸಂಕೀರ್ತನ ಪಿತಾಮಹ' ಬಿರುದಾಂಕಿತರಾದ ಅನ್ನಮಾಚಾರ್ಯರ ಮೊಮ್ಮಗ ಈತ. ದಿನಾಂಕ 12-3-1540 ಚಿನ ತಿರುಮಲಾಚಾರ್ಯನು ಒಂದು ಶಾಸನವನ್ನು ಈ ದೇವಾಲಯ ಗೋಡೆ ಮೇಲೆ ಕೆತ್ತಿಸಿದನು. ಈ ಶಾಸನವನ್ನು ಬರೆದವರು ಯತಿರಾಜರು. ಶಿಥಿಲವಾದ ದೇವಾಲಯವನ್ನು ಉದ್ಧಾರ ಮಾಡಿ ಇಲ್ಲಿ ಅಲಮೇಲುಮಂಗಮ್ಮ, ಅನಂತ, ಗರುಡ, ವಿಷ್ವಕ್ಸೇನ, ಲಕ್ಷ್ಮೀನಾರಾಯಣ ರಂಗನಾಥಸ್ವಾಮಿ ಮತ್ತು ಹನ್ನೆರಡು ಮಂದಿ ಆಳ್ವಾರರು, ರಾಮಾನುಜರ ವಿಗ್ರಹವನ್ನು ಪುನಃ ಪ್ರತಿಷ್ಠೆ ಮಾಡಿದರು. ತನ್ನ ತಾತನಾದ ಅನ್ನಮಾಚಾರ್ಯರ ವಿಗ್ರಹವನ್ನು ಅವುಗಳ ಜತೆಯಲ್ಲಿ ಸೇರಿಸಿ ಗೋಪುರಕ್ಕೆ ಎರಡೂ ಪಾರ್ಶ್ವದಲ್ಲಿ ತಾತನಾದ ಅನ್ನಮಾಚಾರ್ಯ, ತಂದೆಯಾದ ಪೆದತಿರುಮಲಾಚಾರ್ಯನ ರೂಪಗಳನ್ನು ಕೆತ್ತಿಸಿದ. ಆಯಾ ನಕ್ಷತ್ರಗಳಲ್ಲಿ ಆಯಾ ಮೂರ್ತಿಗಳಿಗೆ ನಿರ್ವಹಿಸಬೇಕಾದ ಕೈಂಕರ್ಯಗಳನ್ನು ಶಾಸನದಲ್ಲಿ ಸ್ಪಷ್ಟಪಡಿಸಿದ. ಈ ಶಾಸನದಲ್ಲಿ 'ಅಲಮೇಲುಮಂಗಾಪುರದ' ನಾಮೋಲ್ಲೇಖವಿದೆ. ವಿಕಲ್ಯಾನದಿಯಲ್ಲಿ ಒಂದು ಮಂಟಪವಿದೆ. ಅಲ್ಲಿ ಚಿನ ತಿರುಮಲಾಚಾರ್ಯ ತನ್ನ ಸಂಧ್ಯಾವಂದನಾನಂತರ ಆಸೀನನಾಗಿ ಹಾಡುತ್ತಿದ್ದ ಎಂದು ಐತಿಹ್ಯ. ಇವನ ಕಾಲದಲ್ಲಿ ಶ್ರೀನಿವಾಸಮಂಗಾಪುರ ಅತ್ಯುನ್ನತ ವೈಭವವನ್ನು ಹೊಂದಿತು. ಆದರೆ ಹೈದರ್‌ಅಲೀ ಕಾಲದಲ್ಲಿ ತಿರಿಗಿ ಈ ದೇವಸ್ಥಾನವು ಶಿಥಿಲವಾಯಿತು. ಮ್ಲೇಚ್ಛರು ದೇವಾಲಯದಲ್ಲಿ ಪ್ರವೇಶಮಾಡಿ ಧನಕನಕರಾಶಿಗಳನ್ನು ಎತ್ತಿಕೊಂಡು ಹೋದರು. ಆ ಕಾರಣದಿಂದ ಕೇಳುವವರಿಲ್ಲದೆ ಈ ದೇವಸ್ಥಾನ ಸುಮಾರು ಎರಡ ಶತಾಬ್ದಗಳ ಕಾಲ ಶಿಥಿಲಸ್ಥಿತಿಯಲ್ಲಿ ಬಿದ್ದಿತ್ತು. ಕಾಲಕ್ರಮದಲ್ಲಿ ಈ ದೇವಸ್ಥಾನವು ಪ್ರಾಕ್ತನ ಇಲಾಖೆಯವರ ಅಧೀನವಾಯಿತು.

ಈ ಶತಾಬ್ದಿಯಲ್ಲಿ ಶ್ರೀನಿವಾಸಮಂಗಾಪುರವನ್ನು ಉದ್ಧರಿಸಿದ ಕೀರ್ತಿ 'ಕಾಂಚೀಪುರ ಕೃಷ್ಣಸ್ವಾಮಿ' ಅವರಿಗೆ ಸೇರುತ್ತದೆ. ಅವರಿಗೆ ಸ್ವಾಮಿ ಸ್ವಪ್ನದಲ್ಲಿ ಸಾಕ್ಷಾತ್ಕರಿಸಿದನು. ಕೃಷ್ಣಸ್ವಾಮಿ ಅವರು ಬಹಳಪ್ರಯಾಸದಿಂದ ಈ ದೇವಸ್ಥಾನವನ್ನು ಉದ್ಧರಿಸಿದರು. ಪ್ರಾಕ್ತನ ಇಲಾಖೆಯವರನ್ನು ಬೇಡಿಕೊಂಡು ದೇವರ ಪೂಜೆಯನ್ನು ಪುನಃ ಪ್ರಾರಂಭಿಸಿದರು. 1967 ಸಂವತ್ಸರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನದವರು ಈ ದೇವಸ್ಥಾನವನ್ನು ಸ್ವೀಕರಿಸಿದರು. 1967 ದಿಂದ ದೇವಾಲಯ ಜೀರ್ಣೋದ್ಧಾರ ಅನೇಕರೂಪದಲ್ಲಿ ನಡೆಯುತ್ತಿದೆ.

ಶ್ರೀನಿವಾಸಮಂಗಾಪುರದಲ್ಲಿ ನಡೆಯುವ ಉತ್ಸವಗಳಲ್ಲಿ ಎರಡು ಪ್ರಧಾನವಾದದ್ದು. ಮೊದಲನೆಯದು ಸಾಕ್ಷಾತ್ಕಾರವೈಭವ. ಈ ಉತ್ಸವ ಆಷಾಢಮಾಸ ಶುದ್ಧಸಪ್ತಮಿದಿನ ನಡೆಯುತ್ತದೆ. ಎರಡನೇ ಉತ್ಸವ ಬ್ರಹ್ಮೋತ್ಸವ ತಿರುಮಲೆ ತಿರುಪತಿ ದೇವಸ್ಥಾನದವರು ಪ್ರಥಮ ಪರ್ಯಾಯವಾಗಿ ಈ ಉತ್ಸವವನ್ನು 23-2-81 ರಿಂದ 3-3-81 ವರಿಗೆ ನಡೆಸಿದರು. ಪ್ರಯಾಣ ಸೌಕರ್ಯಗಳಿರುವ ಕಾರಣ ಯಾತ್ರಿಕರು ಶ್ರೀನಿವಾಸಮಂಗಾಪುರಕ್ಕೆ ಹೋಗಿ ಸ್ವಾಮಿ ದರ್ಶನ ಸುಲಭವಾಗಿ ಮಾಡಿಕೊಳ್ಳಬಹುದು.

ಮಂಗಾಪುರದಲ್ಲಿದ್ದ ಹನುಮಂತರಾಯನನ್ನು ಕುರಿತು ತಾಳ್ಲಪಾಕ ವಂಶಸ್ಥರು ಹಾಡಿದ ಕೀರ್ತನೆ ನೋಡಿ–

( 8 ನೇ ಪುಟ ನೋಡಿ )

# ಸುಂದರಕಾಂಡದ ಮಹಿಮೆ

—ಶ್ರೀ ಡಿ. ಕೃಷ್ಣಯ್ಯಂಗಾರ್.

ಶ್ರೀಮದ್ರಾಮಾಯಣದಲ್ಲಿ ಎಲ್ಲ ಕಾಂಡಗಳಿಗೂ, ಕಥಾ ಸಂದರ್ಭಕ್ಕೆ ತಕ್ಕಂತೆ ಅನ್ವರ್ಥವಾಗಿ ಹೆಸರಿರುವಾಗ, ಸುಂದರಕಾಂಡಕ್ಕೆ ಮಾತ್ರ ಹಾಗೆ ಮಾಡಿಲ್ಲ. ಇದಕ್ಕೆ ಪ್ರತ್ಯೇಕವಾದ ಹೆಸರಿಡಲು ಕಾರಣವಿದೆ. ಇದು ಔಚಿತ್ಯಪೂರ್ಣವಾಗಿದೆ. ಈ ಕಾಂಡದ ಕಥಾವಸ್ತು ಸುಂದರ. ಪರಮಸುಂದರರಾದ ಸೀತಾರಾಮರ ವಿಯೋಗ ಈ ಕಾಂಡದ ಕಥಾವಸ್ತು. ಇಂತಹ ವಿರಹಿಗಳ ಮಾನಸಿಕ ಸಮಾಗಮದ ಸಂಧಾನ ಈ ಕಾಂಡದಲ್ಲಿ ರೂಪಿತವಾಗಿದೆ. ಇಂತಹ ಸಂಧಾನಕ್ಕೆ ಕಾರಣಭೂತನಾದವನು ಆಂಜನೇಯ. ಇವನೇ ಈ ಕಾಂಡದ ಕಥಾನಾಯಕ ಎಂದರೆ ತಪ್ಪಾಗದು.

ಆಂಜನೇಯನ ಸುಂದರದೌತ್ಯವೂ, ದೂತ ಸೌಂದರ್ಯವೂ, ಈ ಕಾಂಡದ ಕಥಾನಿರೂಪಣೆ. ಸೌಂದರ್ಯವು ರುಚಿಯಶಕ್ತಿ, ಆ ರುಚಿಯು ಗುಣವೇ ಸುಂದರ. ಹೀಗೆ ಸುಂದರಕಾಂಡವು ನಾನಾ ಸೌಂದರ್ಯಗಳ ಸಮಾಗಮಸ್ಥಾನ. ಸೀತಾರಾಮರು ಅನ್ಯೋನ್ಯ ವಿರಹಿಗಳು, ಅನ್ಯೋನ್ಯ ಚಿಂತಾಕ್ರಾಂತರು, ಅನ್ಯೋನ್ಯ ಅಜ್ಞಾತವಾಸಿಗಳು. ಇಂತಹವರ ಮಾನಸಿಕ ಸಮಾಗಮವನ್ನು ಸಾಧಿಸಿದವನು ಆಂಜನೇಯ. ಇದನ್ನು ಹನುಮತ್ಕಾಂಡ ಎಂದು ಕರೆಯಬಹುದಾಗಿತ್ತು. ಆದರೆ ಹಾಗೆ ಕರೆಯುವುದು ಆಂಜನೇಯ ಸ್ವಭಾವಕ್ಕೆ ವಿರುದ್ಧ. ಏಕೆಂದರೆ 'ದಾಸೋಹಂ ಕೋಸಲೇಂದ್ರಸ್ಯ' – ಎಂದು ತನ್ನ ಸ್ಥಾನವನ್ನು ಗೊತ್ತುಮಾಡಿಕೊಂಡಿರುವ ಆಂಜನೇಯನಿಗೆ ದಾಸತ್ವದ ಅಂಗೀಕಾರವೇ ಅವನ ಉದ್ಧಾರ ಸಾಧನವೇ ವಿನಹ, ಸ್ವಾಮಿಯ ಸಮಾನತೆಯಲ್ಲ. ಹೀಗಿರುವಾಗ ಅವನು ಸ್ವಾಮಿಯ ಸಮಾನತ್ವವನ್ನು ಎಂದಿಗೂ ಒಪ್ಪಲಾರ. ಆದುದರಿಂದಲೇ ಆದಿಕವಿ ವಾಲ್ಮೀಕಿಯು ಈ ಕಥಾಭಾಗವನ್ನು ಅನ್ವರ್ಥ ನಾಮಾಂಕಿತಮಾಡದೆ, ಸಂದರ್ಭಾಂಕಿತಮಾಡಿದ್ದಾನೆ.

"ನಷ್ಟದ್ರವ್ಯಸ್ಯ ಲಾಭೋಹಿ ಸುಂದರಃ ಪರಿಕೀರ್ತಿತಃ" ಎಂಬಂತೆ ನಷ್ಟವಾಗಿದ್ದ ನಿಧಿರೂಪದಲ್ಲಿದ್ದ ಸೀತಾದೇವಿಯನ್ನು ಕಂಡುಹಿಡಿದ ಕಥಾಸಂದರ್ಭ ಈ ಕಾಂಡದಲ್ಲಿದೆ. ರಾವಣನಿಂದ ಅಪಹೃತಳಾದ ಜಗನ್ಮಾತಾ ಸೀತಾದೇವಿಯನ್ನು ಕಂಡುಹಿಡಿದ ಕಥೆ ಸುಂದರ.

ಕಪಿಗಳನ್ನು ಸುಂದರ ಎಂದು ಕರೆಯುವುದು ರೂಢಿಯಲ್ಲಿದೆ. ಸುಂದರಕಾಂಡದಲ್ಲಿ ಆಂಜನೇಯನ ವೀರ್ಯ, ಧೈರ್ಯ, ಸಾಹಸದ ಕಥೆಗಳಿರುವುದರಿಂದ, ಈ ಕಥಾಭಾಗವನ್ನು ಹಾಗೆ ಕರೆಯಲಾಗಿದೆ ಎಂದು ಕೆಲವರ ಅಭಿಪ್ರಾಯ. ಇದಕ್ಕೆ ಕಾರಣ ವಿಲ್ಲದೇ ಇಲ್ಲ. ಸೌಂದರ್ಯ ಎರಡು ವಿಧ; ಒಂದು ಅಂತರಂಗ, ಇನ್ನೊಂದು ಬಹಿರಂಗ. ಬಹಿರಾಕಾರದಲ್ಲಿ ಆಂಜನೇಯನು ಸುಂದರನಲ್ಲ ಎಂದು ಹೇಳಲಾಗದು. ಅವನು ಕಾಮರೂಪಿ. ತನ್ನ ಇಷ್ಟದಂತೆ ಅಣುವಾಗಬಲ್ಲನು. ಬೃಹತ್ತಾಗಬಲ್ಲನು. ಸೌಮ್ಯರೂಪತಾಳಬಲ್ಲನು. ಭಯಂಕರರೂಪ ಹೊಂದಬಲ್ಲನು. ಸುಂದರಾಕಾರವು ಅವನಿಗೆ ದುರ್ಲಭವಾಗಿರಲಿಲ್ಲ. 'ಕಾಂಚನಾದ್ರಿ ಕಮನೀಯ ವಿಗ್ರಹಂ' ಎಂದಿದ್ದಾನೆ ಕವಿ. ಹಾಗೆಯೇ ಅವನ ಅಂತರಂಗ ಸಂಪತ್ತು ವೀರ್ಯದಿಂದ ಕೂಡಿದ್ದು; ಪ್ರಶಂಸನೀಯವಾದುದು. ಅದಕ್ಕಾಗಿಯೇ ಅವನನ್ನು 'ಮನೋಹರಂ ಮಾರುತತುಲ್ಯವೇಗಂ, ಜಿತೇಂದ್ರಿಯಂ, ಬುದ್ಧಿಮತಾಂ ವರಿಷ್ಠಂ" ಎಂದು ಶ್ಲಾಘಿಸಲಾಗಿದೆ. ಹೀಗೆ ಆಂಜನೇಯನ ದಿವ್ಯರೂಪ, ವಾಕ್ಪ್ರವಾಹ, ಆಕಾರಭಂಗಿ, ನಡತೆ, ಭಾವನೆ, –ಎಲ್ಲವೂ ಸುಂದರ. ಅವನಲ್ಲಿ ಅಂತರಂಗ, ಬಹಿಃ ಸೌಂದರ್ಯವಿದ್ದುದರಿಂದ ಅವನ ದೌತ್ಯವೂ ಸುಂದರವಾಯಿತು.

ಇಂತಹ ದೌತ್ಯಕ್ಕೆ ಮಾನವನನ್ನು ಬಿಟ್ಟು ಕಪಿಯನ್ನು ಆರಿಸಿಕೊಂಡದ್ದೇಕೆ? ಇದಕ್ಕೂ ಕಾರಣವಿದೆ. ಅಂದಿನ ಸಂದರ್ಭ ಸೀತಾನ್ವೇಷಣೆ ವಿಶಾಲವಾದ ದಕ್ಷಿಣ ಭಾರತವನ್ನು ಸುತ್ತಬೇಕಾಗಿತ್ತು. ಕಾಡುಮೇಡುಗಳಲ್ಲಿ ಅಲೆದು, ಬೆಟ್ಟಗುಡ್ಡ ಗುಹೆಗಳಲ್ಲಿ ಹುಡುಕಬೇಕಾಗಿತ್ತು. ಸಮುದ್ರ ಲಂಘನ ಅನಿವಾರ್ಯವಾಗಿತ್ತು. ಇಷ್ಟೆಲ್ಲ ಒಂದು ನಿಯಮಿತ ಕಾಲದಲ್ಲಿ ಪೂರ್ಣವಾಗಬೇಕಾಗಿತ್ತು. ಇಂತಹ ವೇಗದ, ಲಂಘನಕಾರ್ಯಕ್ಕೆ ಕಪಿಯು ಅರ್ಹನೇ ವಿನಹ ಮನುಷ್ಯನಲ್ಲ. ಪರಾಕ್ರಮ, ಬಲ, ವೀರ್ಯಾದಿ ವಿಷಯದಲ್ಲಿ ಆಂಜನೇಯನೇ ಅರ್ಹನಾದ ವಾನರರಾಗಿದ್ದನು, ಮೇಲಾಗಿ ಅವನ ಸಾಮರ್ಥ್ಯದಲ್ಲಿ ಸುಗ್ರೀವನಿಗೆ ದೃಢವಾದ ನಂಬಿಕೆ ಇದ್ದಿತು.

ಗುಣವು ಅತಿಶಯವಾದಾಗ, ರೂಪದ ಲೋಪ ಗಣನೀಯವಾಗಿರುವುದಿಲ್ಲ. ರೂಪದ ನ್ಯೂನತೆಯನ್ನು ಗುಣಬಾಹುಳ್ಯವು ಜಯಿಸುತ್ತದೆ. ಆಂಜನೇಯನ ವಾನರತ್ವವು ಮಾಯವಾಗಿ ಅವನು ಕಮನೀಯ ವಿಗ್ರಹನಾಗುತ್ತಾನೆ. ಇಂತಹ ಅನೇಕ ಸಂದರ್ಭಗಳನ್ನು ಆಂಜನೇಯನ ನಡೆನುಡಿಗಳಲ್ಲಿ ಕಾಣಬಹುದು. ಅವೆಲ್ಲವೂ ಸುಂದರ. ಸೀತಾದೇವಿಯ ಸಾನ್ನಿಧ್ಯದಲ್ಲಿ, ಆಂಜನೇಯನು ನಡೆದುಕೊಂಡ ರೀತಿ, ಅವನ ಮಾತಿನ ಇಂಗಿತಜ್ಞತೆ, ವಿನಯ, ವಿವೇಚನೆ, ವಾತ್ಸಲ್ಯ–ಎಲ್ಲವೂ ಸುಂದರವಾಗಿ ಹೃದಯಸ್ಪರ್ಶಿಯಾಗಿದೆ.

ಸುಂದರಕಾಂಡ ಎಂದು ಕರೆಯುವುದಕ್ಕೆ ಇನ್ನೊಂದು ಕಾರಣವಿದೆ. ಈ ಕಾಂಡದ 35ನೆಯ ಸರ್ಗದಲ್ಲಿ ಶ್ರೀರಾಮನ ದಿವ್ಯರೂಪದ ವರ್ಣನೆ ಇದೆ, ಇಂತಹ ಸುಂದರ ರೂಪವನ್ನು ಆಂಜನೇಯನು ಮನೋಹರವಾಗಿ, ಚಮತ್ಕಾರಯುತವಾಗಿ ವರ್ಣಿಸಿದ್ದಾನೆ. ಶ್ರೀರಾಮನ ಸುಂದರ ರೂಪದ ಲಕ್ಷಣಗಳನ್ನು ಗುರುತನ್ನೂ ತಿಳಿಸುತ್ತಾನೆ. ಇಂತಹ ವರ್ಣನೆ ಸಮಯೋಚಿತವಾಗಿರುವುದರಿಂದಲೇ ಇದಕ್ಕೆ ಸುಂದರಕಾಂಡ ಎಂಬ ಹೆಸರು ಸಾರ್ಥಕವಾಗಿದೆ, ಉಚಿತವೂ ಆಗಿದೆ.

ನಮೋಸ್ತು ರಾಮಾಯ ಸಲಕ್ಷ್ಮಣಾಯ
ದೇವ್ಯೈಚ ತಸ್ಯೈ ಜನಕಾತ್ಮಜಾಯೈ ।
ನಮೋಸ್ತು ರುದ್ರೇಂದ್ರ ಯಮಾನಿಲೇಭ್ಯೋ
ನಮೋಸ್ತು ಚಂದ್ರಾರ್ಕ ಮರುದ್ಗಣೇಭ್ಯಃ ॥

ಈ ಶ್ಲೋಕವು ರಾಮತಾರಕ ಮಂತ್ರದ ವಿವರಣೆ ಎಂದು ದಕ್ಷಿಣಭಾರತದ ಪಂಡಿತರು ಅಭಿಪ್ರಾಯಪಟ್ಟಿದ್ದಾರೆ. ಈ ಮಂತ್ರದ ಪುನಶ್ಚರಣೆಯಿಂದ ಆತ್ಮೋದ್ಧಾರವಾಗುವುದು. ಇದು ಮೋಕ್ಷೋಪಾಯ ಸಾಧನ ಎಂಬ ನಂಬಿಕೆ ಇದೆ. ಈ ಶ್ಲೋಕ ಈ ಕಾಂಡದಲ್ಲಿ ಬರುವುದರಿಂದ ಇದಕ್ಕೆ ಸುಂದರಕಾಂಡ ಎಂಬ ಹೆಸರು ಅನ್ವರ್ಥವಾಗಿದೆ.

ಸುಂದರಕಾಂಡ ಎಂದು ಕರೆಯುವುದಕ್ಕೆ ಮತ್ತೊಂದು ಪ್ರಬಲಕಾರಣವಿದೆ.

ಸುಂದರೇ ಸುಂದರೀಲಂಕಾ
ಸುಂದರೇ ಸುಂದರೀಕಥಾ !
ಸುಂದರೇ ಸುಂದರೀ ಸೀತಾ
ಸುಂದರೇ ಕಿಂ ನ ಸುಂದರಂ ॥
ಸುಂದರೇ ಸುಂದರೀ ಸೀತಾ
ಮುಕ್ತಿತಾಂ ಮಾರುತೇರ್ಮುಖಾತ್ ।
ಶ್ರುತ್ವಾಪ್ಯದೃಷ್ಟಸ್ತಥೈವಾಸ್ತು
ಸ ರಾಮೋ ಸತತಂಹೃದಿ ॥

ಸುಂದರನಗರ ಲಂಕೆಯ ವರ್ಣನೆ ಈ ಕಾಂಡದಲ್ಲಿದೆ, ಇಲ್ಲಿಯ ಕಥೆ ಸುಂದರವಾಗಿ ನಿರೂಪಿತ

ವಾಗಿದೆ. ಸೀತಾದೇವಿಯ ಮತ್ತು ಆಂಜನೇಯನ ವಾಕ್ಪ್ರವಾಹವು ಸುಂದರವಾಗಿದೆ. ಸುಂದರವಾದ ಮಾತಿನಿಂದ ಬಂದ ಸೀತಾದೇವಿಯ ಯೋಗ ಕ್ಷೇಮವನ್ನು ಕೇಳಿ ಶ್ರೀರಾಮನು ಹರ್ಷಿತನಾದುದು ಸುಂದರವಲ್ಲವೇ.

ಹೀಗೆ ಎಲ್ಲ ವಿಧದಲ್ಲಿ ಸುಂದರಕಾಂಡವು ಸುಂದರವಾಗಿರುವುದರಿಂದ ಆದಿಕವಿ ವಾಲ್ಮೀಕಿ ಮಹರ್ಷಿಯು,

ಕಾಮಾರ್ಥಗುಣ ಸಂಯುಕ್ತಂ,
ಧರ್ಮಾರ್ಥ ಗುಣ ವಿಸ್ತರಂ ।
ಸಮುದ್ರಮಿವ ರತ್ನಾಢ್ಯಂ
ಸರ್ವಶ್ರುತಿ ಮನೋಹರಂ ॥

ಎಂದಿದ್ದಾನೆ. ಇಂತಹ ಮಹಿಮೆ ಇನ್ನಾವ ಕಾಂಡಕ್ಕೂ ಇಲ್ಲ.

ಅಕ್ಷರಗಳಲ್ಲಿ ಅಕಾರಕ್ಕೂ, ಮಂತ್ರಗಳಲ್ಲಿ ಗಾಯತ್ರಿಗೂ, ಅವಯವಗಳಲ್ಲಿ ಶಿರಸ್ಸಿಗೂ, ನದಿಗಳಲ್ಲಿ ಗಂಗಾನದಿಗೂ, ವೇದಗಳಲ್ಲಿ ಸಾಮ ವೇದಕ್ಕೂ, ವಿಷ್ಣು ಸಹಸ್ರನಾಮದಲ್ಲಿ ರಾಮ ನಾಮಕ್ಕೂ, ಪತಿವ್ರತಾ ಸ್ತ್ರೀಯರಲ್ಲಿ ಸೀತಾ ದೇವಿಗೂ, ಮಹರ್ಷಿ ವ್ಯಾಸಕೃತಿಗಳಲ್ಲಿ ಭಗವ ದ್ಗೀತೆಗೂ, ವೃಷ್ಣಿಗಳಲ್ಲಿ ಶ್ರೀಕೃಷ್ಣನಿಗೂ, ಪವಿತ್ರ ಸ್ಥಾನವಿರುವಂತೆ ಸುಂದರಕಾಂಡಕ್ಕೆ ಪರಮಪವಿತ್ರ ಮಹಿಮೆ ಇದೆ. ದೈವದತ್ತವಾದ ಸರ್ವೋತ್ಕೃಷ್ಟತೆ ಇದೆ.

ಆಂಜನೇಯನ ಸೌಭಾಗ್ಯ ಸುಂದರ. ಇತ್ತ ಕಡೆ ಶ್ರೀರಾಮನ ಹಸ್ತಸ್ಪರ್ಶ ಸೌಭಾಗ್ಯವನ್ನು ಪಡೆದ ಅಂಗುಳಿಯನ್ನು, ಅತ್ತ ಕಡೆ ಸೀತಾದೇವಿಗೆ ಹಸ್ತಗತವಾಗುವಂತೆ ಮಾಡಿದ್ದು ಸುಂದರವಲ್ಲವೇ? ಅತ್ತ ಕಡೆ ಜಾನಕೀ ಹಸ್ತ ಸ್ಪರ್ಶ ಸೌಭಾಗ್ಯವನ್ನು ಪಡೆದ ಚೂಡಾಮಣಿಯನ್ನು ಇತ್ತ ಕಡೆ ರಾಘವ ಸಿಂಹನ ಹಸ್ತಗತವಾಗುವಂತೆ ಮಾಡಿದ್ದು ಸುಂದರ ವಲ್ಲವೇ? ಇಂತಹ ಉಭಯ ಸೌಂದರ್ಯಗಳ ಸಂಧಿಸ್ಥಾನ ಆಂಜನೇಯ. ಇದನ್ನು ಸಾಧಿ ಸಿದುದು ಸುಂದರಕಾಂಡದಲ್ಲಿ. ಇಂತಹ ಸುಂದರ ಸನ್ನಿವೇಶದಲ್ಲಿ ಮಾನವರು ಕಾಣುವ ಸೌಂದರ್ಯ ಕ್ಕಿಂತ ಹೆಚ್ಚು ಆನಂದವನ್ನೂ ತೃಪ್ತಿಯನ್ನೂ ಆಂಜನೇಯನು ಕಂಡನು. ಅವನ ಯೋಗಕ್ಕಿಂತ ಹೆಚ್ಚು ಸುಂದರವಾದದ್ದು ಇನ್ನಾವುದು ತಾನೇ ಇದ್ದೀತು? ಆದುದರಿಂದ ಸುಂದರಕಾಂಡ ಎಂಬ ಹೆಸರು, ಅನ್ವರ್ಥ, ಅರ್ಹ, ಮತ್ತು ತೃಪ್ತಿಕರ.

ಎಲ್ಲಕ್ಕಿಂತ ಮೇಲಾಗಿ ಸುಂದರಕಾಂಡ ಪಠಣವು ಸಕಲ ಇಷ್ಟಾರ್ಥಗಳನ್ನು ಕೊಡುವುದು.

ಜಯತ್ಯತಿಬಲೋ ರಾಮೋ
ಲಕ್ಷ್ಮಣಶ್ಚ ಮಹಾಬಲಃ
ರಾಜಾಜಯತಿ ಸುಗ್ರೀವೋ
ರಾಘವೇಣಾಭಿ ಪಾಲಿತಃ ।
ದಾಸೋಹಂ ಕೋಸಲೇಂದ್ರಸ್ಯ
ರಾಮ ಸ್ಯಾಕ್ಲಿಷ್ಟಕರ್ಮಣಃ ।
ಹನುಮಾನ್‌ಶತ್ರುಸೈನ್ಯಾನಾಂ
ನಿಹಂತಾ ಮಾರುತಾತ್ಮಜಃ ।

ನರಾವಣ ಸಹಸ್ರಂಮೇ
ಯುದ್ಧೇ ಪ್ರತಿಬಲಂ ಭವೇತ್ ।
ಶಿಲಾಭಿಶ್ಚ ಪ್ರಹರತಃ ಪಾದಪೈಶ್ಚ ಸಹಸ್ರಶಃ ।
ಅರ್ದಯಿತ್ವಾ ಪುರೀಂ ಲಂಕಾಂ
ಮಭಿವಾದ್ಯ ಚ ಮೈಥಿಲೀಂ ।
ಸಮೃದ್ಧಾರ್ಥೋಗಮಿಷ್ಯಾಮಿ
ಈಕ್ಷತಾಂ ಸರ್ವರಾಕ್ಷಸಾಂ ॥

ಅಪ್ರತಿಹತ ಬಲಶಾಲಿಯಾದ ಶ್ರೀರಾಮನು ಜಯಶೀಲನಾದನು. ಅತಿಪರಾಕ್ರಮಿಯಾದ ಲಕ್ಷ್ಮಣನು ಜಯಗಳಿಸಿದನು. ಹಾಗೆಯೇ ಶ್ರೀರಾಮನ ರಕ್ಷಣೆಯಿಂದ ಸುಗ್ರೀವನು ಗೆದ್ದನು. ವಾಯುಪುತ್ರ ಆಂಜನೇಯನಾದ ನಾನು ಕೋಸ ಲೇಂದ್ರನ ಕಷ್ಟರಹಿತ ಕಾರ್ಯ ಮತ್ತು ಶತ್ರು ಸಂಹಾರಕನಾದ ಶ್ರೀರಾಮನ ದೂತನಾಗಿದ್ದೇನೆ. ಸಹಸ್ರ ಮರಬಂಡೆಗಳಿಂದ ಯುದ್ಧದಲ್ಲಿ ಎದುರಿಸು ಬೇಕಾದ ನಾನು ಸಹಸ್ರರಾವಣವನ್ನಾದರೂ ಕೂಡ ಜಯಿಸಬಲ್ಲೆ. ಲಂಕಾನಗರವನ್ನು ಧ್ವಂಸ ಮಾಡಿ ಮೈಥಿಲಿಯನ್ನು ಸ್ವಾಗತಿಸಿ ನನ್ನ ಇಷ್ಟಾ ರ್ಥವನ್ನು ಪೂರ್ಣಗೊಳಿಸಿ, ಎಲ್ಲ ರಾಕ್ಷಸರು ನೋಡುತ್ತಿರುವಂತೆ ಜಯಶೀಲನಾಗಿ ಹಿಂತಿರು ಗುವೆನು" ಎಂದು ಗಟ್ಟಿಯಾಗಿ ಹೇಳುತ್ತ ಸುಂದರ ಕಾಂಡವನ್ನು ಪಠಿಸಿದರೆ ಶ್ರೇಷ್ಠ ರೀತಿಯ ಪರಿಪೂರ್ಣ ಇಷ್ಟಾರ್ಥ ಪಡೆಯಬಹುದು. ಆದುದರಿಂದ ಸುಂದರಕಾಂಡ ಪಠಣವು ಹೆಚ್ಚು ಮಹಿಮೆ ಯಿಂದ ಕೂಡಿದೆ ಎನ್ನಬೇಕು.

———

( 6 ನೇ ಪುಟದಿಂದ )

"ಒಕ್ಕಡೇ ಯೇಕಾಂಗವೀರುಡುರ್ವಿಕಿ ದೈವ–
ಮೈನಾಡು
ಎಕ್ಕಡಾ ಹನುಮಂತುನಿಕೆದುರಾ ಲೋಕಮು
ಮುಂದಟನೇಲೇ ಪಟ್ಟಮುನಕು
ಬ್ರಹ್ಮಯಿನಾಡು
ಅಂದರು ದೈತ್ಯುಲ ಜಂಪಿ ಹರಿ ಪೇರೈನಾಡು
ಅಂದಿ ರುದ್ರವೀರ್ಯಮು ತಾನೈ
ಹರುಡೈನಾಡು
ಎಂದು ನೀ ಹನುಮಂತುನಿ ಕೆದುರಾ
ಲೋಕಮು ॥ ಒಕ್ಕಡೇ ॥
ಚುಕ್ಕಲು ಮೋವ ಪೆರಿಗಿ ಸೂರ್ಯುಡು
ದಾನೈನಾಡು
ಚಿಕ್ಕು ಪಾತಾಳಮು ದೂರಿ ಶೇಷುಡೈನಾಡು
ಗಕ್ಕುನ ವಾಯುಜುಡೈ ಜಗತ್ಪ್ರಾಣುಡೈನಾಡು
ಎಕ್ಕುವಹನುಮಂತುನಿಕೆದುರಾ ಲೋಕಮು
॥ ಒಕ್ಕಡೇ ॥
ಜಲಧಿ ಬುಟಮೆಗಸಿ ಚಂದ್ರುಡು
ದಾನೈನಾಡು
ಚೆಲಗಿ ಮೇರುವು ಪೊಂತ ಸಿಂಹಮೈನಾಡು
ಬಲಿಮಿ ಶ್ರೀವೇಂಕಟೇಶು ಬಂಟೈ
ಮಂಗಾಬುಧಿ
ನಿಲ ಯಿಾ ಹನುಮಂತುನಿ ಕೆದುರಾ
ಲೋಕಮು ॥ ಒಕ್ಕಡೇ ॥
(11–2–167)

ಹನುಮಂತನು ಏಕಾಂಗವೀರನು. ಈ ಭೂಮಿಗೆ ದೇವನಾದನು. ಹನುಮಂತನಿಗೆ ಎದುರು ಯಾರೂ ಇಲ್ಲ.

ಅವನು ಬ್ರಹ್ಮ. ನವಬ್ರಹ್ಮಗಳಲ್ಲಿ ಹನುಮಂತ ನೊಬ್ಬನು. ಬ್ರಹ್ಮಪಟ್ಟ ಬರುವುದರಿಂದ ಬ್ರಹ್ಮ ಸ್ವರೂಪನು. ದೈತ್ಯರನ್ನು ನಾಶಮಾಡುವುದರಿಂದ ಹರಿಸ್ವರೂಪನು. ರುದ್ರವೀರ್ಯದಿಂದ ಜನಿಸಿದ ಕಾರಣ ರುದ್ರನೂ ಆಗುತ್ತಾನೆ. ಅವನಲ್ಲಿ ತ್ರಿಮೂರ್ತತ್ತ್ವವು ಇದೆ. ನಕ್ಷತ್ರಗಳವರಿಗೆ ಬೆಳೆದು ಸೂರ್ಯನಾದ. ಪಾತಾಳವನ್ನು ಹೊಕ್ಕು ಆದಿಶೇಷನಾದ. ವಾಯುಪುತ್ರನಾಗಿ ಪ್ರಾಣೇಶ ನಾದ. ಜಲಧಿ ಮೇಲೆ ತಿರುಗಾಡಿ ಚಂದ್ರನಾದ. ಮೇರು ಪರ್ವತಸಮೀಪದಲ್ಲಿ ಸಿಂಹನಾದ. ಶ್ರೀ ವೆಂಕಟೇಶ್ವರನ ಸೇವಕನಾಗಿ ಮಂಗಾಂಬುಧಿ ಯಲ್ಲಿ ನಿಂತ ಹನುಮಂತನಿಗೆ ಈ ಲೋಕಗಳು ಎಷ್ಟುಮಾತ್ರ?

ಹೀಗೆ ಇಲ್ಲಿನ ಪ್ರತಿಯೊಂದು ವಿಗ್ರಹವೂ ಪವಿತ್ರ ಕಥನದಿಂದ ಶ್ಲಾಘಿಸಲ್ಪಟ್ಟು ನೋಟಕರನ್ನು ಭಕ್ತಿಪರವಶರನ್ನಾಗಿಸುತ್ತದೆ.

———



# ಗೃಹಲಕ್ಷ್ಮಿ





## ಭೀಮೇಶ ಕೃಷ್ಣನ "ಶುಕ್ರವಾರದ ಹಾಡು"

ಶ್ರೀಮತಿ ರುಕ್ಮಿಣೀಗಿರಿಮಾಜಿ, ಎಂ.ಎ

ಇತಿಹಾಸದಲ್ಲಿ ಸುಪ್ರಸಿದ್ಧರಾದ ಅನೇಕ ಭಕ್ತಾಗ್ರೇಸರ ಮಹಿಳೆಯರು ಎಲೆಮರೆಯ ಕಾಯಂತೆ ಮರೆಯಾಗಿ ನಿಂತು ಸತ್ವಿಂದ್ದಾಂತದ ಅನೇಕ ಧ್ಯೇಯಗಳನ್ನು ಲೀಲಾಜಾಲವಾಗಿ ಆಡುಭಾಷೆಯಲ್ಲಿ ಬರೆದು ನಾಡಿಗೂ, ನುಡಿಗೂ ಸೇವೆ ಸಲ್ಲಿಸಿದ್ದಾರೆ. ಅಂತಹ ಲಲನಾಮಣಿಯರಲ್ಲಿ ಕನ್ನಡಿತಿ ಹರಪನಹಳ್ಳಿಯ ಭೀಮವ್ವ ಶಿರೋರತ್ನದಂತಿದ್ದಾಳೆ, ಏಕೆಂದರೆ ಈಕೆಯು ರಚಿಸಿದಷ್ಟು ಕೃತಿಗಳನ್ನು ಈವರೆಗೂ ಕನ್ನಡದ ಯಾವ ಹೆಣ್ಣುಮಗಳೂ ರಚಿಸಿದಂತಿಲ್ಲ. ಒಂದಲ್ಲ, ಎರಡಲ್ಲ, ನಮ್ಮ ನಾಡಿನ ಸತ್ಸಂಪ್ರದಾಯಗಳು, ಹಬ್ಬ-ಹರಿದಿನಗಳು ಇವುಗಳ ಬಗ್ಗೆಯೇ ಅಲ್ಲದೆ ಶ್ರೀಮದ್ರಾಮಾಯಣ, ಭಾರತ, ಭಾಗವತ ಪುರಾಣಗಳಿಂದ ಸೊಗಸಾದ ಭಾಗಗಳನ್ನು ಆಯ್ದುಕೊಂಡು ಬಹಳ ರಮ್ಯವಾಗಿಯೂ, ಹೃದ್ಯವಾಗಿಯೂ ಸರಳ ಕನ್ನಡದಲ್ಲಿ ಸುಲಲಿತವಾಗಿ ರಚನೆಗಳನ್ನು ಮಾಡಿದ್ದಾಳೆ. ಇಂದಿಗೂ ಮಹಿಳೆಯರು ಹೇಳುವ ಹಾಡುಗಳಲ್ಲಿ ಅನೇಕವು ಭೀಮವ್ವನವೇ. ಅರಿತೋ, ಅರಿಯದೆಯೋ, ಭೀಮೇಶಕೃಷ್ಣನ ಮುದ್ರಿಕೆಯುಳ್ಳ ಹಾಡುಗಳನ್ನು ಎಲ್ಲರೂ ಹಾಡುತ್ತಾರೆ.

ವೈಷ್ಣವ ಸಂಪ್ರದಾಯದಲ್ಲಿ ಜನಿಸಿದ ಭೀಮವ್ವನ ತೌರುಮನೆಯೂ ಹರಪನಹಳ್ಳಿ, ಅತ್ತೆಯ ಮನೆಯೂ ಹರಪನಹಳ್ಳಿಯೇ. ಈಕೆಗೆ ಓದಲು ಬರುತ್ತು ಬರೆಯಲು ಬರುತ್ತಿರಲಿಲ್ಲವೆನ್ನುತ್ತಾರೆ. ಬಹಳ ಚಿಕ್ಕ ವಯಸ್ಸಿಗೇ ವಿಧವೆಯಾದ ಈಕೆ ತನ್ನ ಜೀವಿತಕಾಲವನ್ನೆಲ್ಲಾ ಶ್ರೀಕೃಷ್ಣಭಕ್ತಿಗೇ ಮುಡುಪಾಗಿಟ್ಟಿದ್ದಳು. ಭಗವಂತನ ಸಾನ್ನಿಧ್ಯದಲ್ಲಿ ಭಕ್ತಿಯಿಂದ ಕುಳಿತಾಗ ಆಕೆಯ ಬಾಯಿಂದ ನಿರರ್ಗಳವಾಗಿ ನುಡಿಗಳು ಹೊರಡುತ್ತಿದ್ದುವು. ಕತ್ತಿರವಿದ್ದವರು ಅವುಗಳನ್ನು ಲಿಪಿಬದ್ಧಗೊಳಿಸುತ್ತಿದ್ದರು. ಈಕೆಯ ತೌರುಮನೆಯ ಹೆಸರು ಭೀಮವ್ವ, ಅತ್ತೆಮನೆಯ ಹೆಸರು ಕೃಷ್ಣಾಬಾಯಿ. ಇವೆರಡನ್ನೂ ಹೊಂದಿಸಿಕೊಂಡು ಈಕೆ ಭೀಮೇಶ ಕೃಷ್ಣ ಮುದ್ರಿಕೆಯಿಂದ ಕೃತಿಗಳನ್ನು ರಚಿಸುತ್ತಿದ್ದಳು. ಇಂತಹ್ಯ ಕೃತಿಗಳು ನೂರಾರು. ಇವು ಪುರಾಣದ ಕಥೆಗಳಾಗಿರಬಹುದು, ಭಾಗವತದ ಸರಸ-ಸುಂದರ ಸನ್ನಿವೇಶಗಳಿರಬಹುದು, ಒಗಟುಗಳಿರಬಹುದು. ಎಲ್ಲ ರಚನೆಗಳಲ್ಲೂ ಆಕೆಗಿರುವ ಜೀವನದ ಆಳವಾದ ಅನುಭವ, ಸೂಕ್ಷ್ಮ ಸಂವೇದನೆ, ಮಿಡಿತ-ತುಡಿತಗಳು ಕಂಡುಬರುತ್ತವೆ. ಇವೆಲ್ಲಕ್ಕೂ ಕಳಶಪ್ರಾಯವಾಗಿ ಭಕ್ತಿಭಾವವಿರುತ್ತದೆ. ಇಂತಹವುಗಳಲ್ಲಿ ಆಕೆಯ 'ಸಂಪತ್ ಶುಕ್ರವಾರದ ಹಾಡು' ಗಮನಾರ್ಹವಾಗಿದೆ.

ಶ್ರಾವಣಮಾಸ ಬಂದಿತೆಂದರೆ ಮುಗಿಲಿನಲ್ಲಿ ಉಬ್ಬಿ ಉಬ್ಬಿ ಘನಗರ್ಜನೆಯೊಂದಿಗೆ ಸಾಲುಸಾಲಾಗಿ ಬರುವ ಜಲಭರಿತ ಮೋಡಗಳಂತೆ ಹಬ್ಬಗಳ ಸಾಲುಸಾಲೇ ಬರುತ್ತದೆ. ಶ್ರಾವಣದ ಶುಕ್ರವಾರ ಹಾಗೂ ಶನಿವಾರಗಳಲ್ಲಿ ಮಾಧ್ವರು ಸಾಮಾನ್ಯವಾಗಿ ಶುಕ್ರವಾರದ ಗೌರೀಪೂಜೆಯನ್ನು ಮಾಡುತ್ತಾರೆ. ಹೊಸ ಮಡಿಕೆಯ ಮೇಲೆ ರಂಗೋಲಿಯಿಂದ ಚಿತ್ರ ಬರೆದು ಅದರ ಒಳಗೆ ಐದು ಫಲಗಳನ್ನೂ, ಮಂತ್ರಾಕ್ಷತೆಯನ್ನೂ ಹಾಕಿ ಕಲಶವಿಟ್ಟು ಅದನ್ನು ಪೂಜಿಸುತ್ತಾರೆ. ಈ ಕಲಶವನ್ನು ಮಹಾಲಕ್ಷ್ಮಿಯೆಂದು ಪೂಜಿಸುತ್ತಾರೆ. ವಾಸ್ತವದಲ್ಲಿ ಇದು ಲಕ್ಷ್ಮೀಪೂಜೆ ಯಾದರೂ ಕೂಡಾ ವಾಡಿಕೆಯಲ್ಲಿ ಇದನ್ನು ಶುಕ್ರವಾರದ ಗೌರಿಯೆಂದು ಕರೆಯುತ್ತಾರೆ. ಬಗೆಯ ಬಗೆಯ ಪಕ್ವಾನ್ನಗಳನ್ನೂ, ಭಕ್ಷ್ಯಗಳನ್ನೂ ಮಾಡಿ ಮಹಾಲಕ್ಷ್ಮಿಗೆ ನೈವೇದ್ಯವಿಟ್ಟು ಬ್ರಾಹ್ಮಣರು ಮುತ್ತೈದೆಯರೊಂದಿಗೆ ಸಂಭ್ರಮ ಪಡುತ್ತಾರೆ. ಈ ಪೂಜೆಯನ್ನು ಮಾಡುವುದರಿಂದ ಸರ್ವಮಂಗಳವುಂಟಾಗುವುದೆಂದು ನಂಬುತ್ತಾರೆ.

ಹೀಗೆ ಒಮ್ಮೆ ಹೆಂಗೆಳೆಯರೆಲ್ಲಾ ಈ ಪೂಜೆಯನ್ನು ಮಾಡುತ್ತಿರಲು ಒಬ್ಬ ಬಡಬ್ರಾಹ್ಮಣ ನಿತ್ಯಯಾತ್ರೆಗಾಗಿ ಬಂದಿರುತ್ತಾನೆ. ಅವನಿಗೆ ಮನೆಯಲ್ಲಿ ಹೆಂಡತಿ, ನಾಲ್ಕುಜನ ಗಂಡುಮಕ್ಕಳು ನಾಲ್ವರು ಸೊಸೆಯರು ಮೊಮ್ಮಕ್ಕಳುಂಟು. ಆತನಿಗೆ ವಸನಕ್ಕಿಲ್ಲ, ಹಸುಳೆಗಳಿಗೆ ಹಾಲಿಲ್ಲ. ನಿತ್ಯ ಯಾತ್ರೆಯಿಂದಲೇ ಜೀವನ. ಅವನು ಆ ದಿನ ಈ ವ್ರತದ ಬಗ್ಗೆ ಕೇಳಿ ತನಗೂ ಒಂದು ಚಟ್ಟಿಗೆ ಬರೆದುಕೊಂಡುವಂತೆ ಕೇಳುತ್ತಾನೆ. ಆ ಮನೆಯೊಡತಿ ಬರೆದುಕೊಡುತ್ತಾಳೆ. ಅದನ್ನು ಹಿಡಿದು ಆತ ಹೊರಟಾಗ ಆತನಿಗೆ ಬೇಕಾದ್ದು ದೊರೆಯುತ್ತದೆ. ಮನೆಗೆ ಹೋಗಿ ಹೆಂಡತಿಗೆ ಪೂಜಾವಿಧಾನವನ್ನು ತಿಳಿಸುತ್ತಾನೆ. ಅಂತೆಯೇ ಎಲ್ಲರೂ ಸೇರಿ ಪೂಜೆಗೆ ಅಣಿಮಾಡಿಕೊಂಡು ಊಟಕ್ಕೆ ಒಬ್ಬ ಮುತ್ತೈದೆಗೆ ಹೇಳಲಿಕ್ಕಾಗಿ ಕೊನೆಯ ಸೊಸೆಯನ್ನು ಕಳಿಸುತ್ತಾರೆ. ಆಕೆ ಊರ ಬಾಗಿಲಿಗೆ ಬರುವ ವೇಳೆಗೆ ಅಲ್ಲಿ ಸರ್ವಾಲಂಕಾರ ಭೂಷಿತೆಯಾದ ಮುತ್ತೈದೆಯೊಬ್ಬಳು ಪ್ರಕಟವಾಗಿ, ಎಣ್ಣೆ ಅರಿಶಿನವನ್ನು ತೆಕ್ಕೊಂಡು ತಾನು ಖಂಡಿತವಾಗಿ ಭೋಜನಕ್ಕೆ ಬರುತ್ತೇನೆನ್ನುತ್ತಾಳೆ. ಪೂಜೆ ನೈವೇದ್ಯಗಳು ಮುಗಿದು ಆರು ತಾಸಾದರೂ ಆಕೆ ಬರುವುದಿಲ್ಲ. ಬೇರೊಬ್ಬ ಮುತ್ತೈದೆಗೆ ಹೇಳಿ ಸರ್ವರೂ ಭೋಜನ ಮಾಡುತ್ತಾರೆ. ಹೀಗೆ ನಾಲ್ಕು ವಾರಗಳೂ, ಆ ಮುತ್ತೈದೆ ಬರುತ್ತೇನೆನ್ನುವುದು, ಬಾರದಿರುವುದಾಗಿ ಹೋಗುತ್ತದೆ. ಕೊನೆಯ ವಾರ ಆ ಬ್ರಾಹ್ಮಣನ ಹೆಂಡತಿಯೇ ಕರೆಯಲು ಹೋಗುತ್ತಾಳೆ, ಯಥಾಪ್ರಕಾರ ಈ ಮುತ್ತೈದೆ ಪ್ರಾಪ್ತಳಾಗಿ ಈ ಬಾರಿ ಬಂದೇ ಬರುತ್ತೇನೆಂದು ಹೇಳುತ್ತಾಳೆ. ಪೂಜಾದಿಗಳು ನೆರವೇರುತ್ತವೆ. ಸಂಜೆಯಾಗುತ್ತಾ ಬರುತ್ತದೆ, ಆಗ ಆ ಮುತ್ತೈದೆ ಇವರ ಮನೆಗೆ ಬರುತ್ತಾಳೆ. ಆಕೆಯೇ ಮಹಾಲಕ್ಷ್ಮಿ. ಆಕೆಯ ಒಂದೇ ವಾರೆ ನೋಟದಿಂದ ಇವರಿಗೆ ಸಕಲ ಸಂಪತ್ತು ಲಭ್ಯವಾಗುತ್ತದೆ. ಆಕೆಯನ್ನು ಮಂಗಳವಾದ್ಯಗಳಿಂದ

ಎದುರುಗೊಳ್ಳುತ್ತಾರೆ, ಆಕೆಯು ನೇರವಾಗಿ ಬ್ರಾಹ್ಮಣನ ದೇವರ ಮನೆಯನ್ನು ಹೊಕ್ಕು ಚೊಕ್ಕ ಚಿನ್ನದ ಕೊಡವಾಗಿ ಕೂತುಬಿಡುತ್ತಾಳೆ. ನಂತರ ಎಲ್ಲರೂ ಆಕೆಯನ್ನು ಪೂಜಿಸಿ ಆಕೆಯ ಕೃಪೆಗೆ ಪಾತ್ರರಾಗುತ್ತಾರೆ. ಇದೇ ಸಂಪತ್ ಶುಕ್ರವಾರದ ಕಥೆ. ಭೀಮವ್ವ ಇದನ್ನು ಎಷ್ಟು ರಸವತ್ತಾಗಿ ನಿರೂಪಿಸಿದ್ದಾಳೆ.

'ಐದು ಶುಕ್ರವಾರದ ಹಾಡು' ಎಂಬುದು ಈ ಕೃತಿಯ ಹೆಸರು. ಇದರಲ್ಲಿ 109 ನುಡಿಗಳಿವೆ. ಧಾಟಿ ಸುಲಭವಾದ ಸಾಂಗತ್ಯದ ಧಾಟಿ ಮೊದಲನೆಯ ಪದ್ಯದಲ್ಲಿ "ಹರನ ಕುಮಾರನ ಚರಣ ಕಮಲಕ್ಕೆರಗಿ ಶಾರದೆಗೆ ವಂದಿಸುತ್ತಾ, ಶರಧಿ ಶಯನನನ್ನು ಶರಗೊಡ್ಡಿಬೇಡಿ, ಶರಧಿಸುತೆಯ ಕತೆಯನೊರೆವೆ" ಎಂದಿದ್ದಾಳೆ. ನಂತರ "ಸಾಕ್ಷಾತ್ ಶ್ರೀಹರಿ ವಕ್ಷಸ್ಥಳವಾಸಿ .. ... ... ... ... ... ...ಮಹಾಲಕ್ಷ್ಮಿ ನೀನು ನನ್ನನ್ನು ಕರುಣ ಕಟಾಕ್ಷದಿ ನೋಡು" ಎಂದು ಬೇಡಿಕೊಂಡಿದ್ದಾಳೆ, ಆಮೇಲೆ ಕಥೆಯ ಆರಂಭ.

ಬಡಬ್ರಾಹ್ಮಣ ಅವನ ಪರಿಸ್ಥಿತಿ ಇತ್ಯಾದಿಗಳನ್ನು ವಿವರಿಸಿ ಅವನು ಚಟ್ಟಿಗೆಯನ್ನು ಬರೆಸಿಕೊಂಡು ಪೂಜೆಗೆ ಸಿದ್ಧಮಾಡಿಕೊಳ್ಳುತ್ತಾನೆ. ಆವರ ಮನೆಯ ಅಡಿಗೆ ಸಂಭ್ರಮದ ವ್ಯಾಜದಿಂದ ಭೀಮವ್ವ ಕನ್ನಡ ನಾಡಿನ ಅಡಿಗೆಯ ವೈವಿಧ್ಯ, ವೈಭವಗಳನ್ನು ಹೇಳುತ್ತಾಳೆ. ಐನತ್ತಕ್ಕೂ ಮೀರಿದ ಭಕ್ಷ್ಯ ಭೋಜ್ಯ, ಚೋಷ್ಯ ಲೇಹ್ಯಗಳೆಲ್ಲ ಇಲ್ಲಿ ಸೇರಿವೆ. ಇಲ್ಲಿನ ಶ್ಯಾವಿಗೆಯ ಫೇಣಿ ಚಂದ್ರನಂತೆ ಹೊಳೆಯುವುದಂತೆ. ಹಪ್ಪಳ ಚಂದದಿಂದ ಉಬ್ಬಿ ಏರಿದೆ. ಉಪ್ಪಿನಬೇಳೆ ಮೆಣಸಿನಕಾಯಿ ಇಂಗುಗಳಿಂದ ಕೂಡಿ ರುಚಿಕರವಾದ ಕಪ.ಬು, ಆರು ವಿಧದ ಚಟ್ನಿಗಳು, ಮಾಗಿದ ಹಲಸಿನಕಾಯಿಯ ಮೇಲೋಗರ, ಒಂದೇನು ಎರಡೇನು ಬಾಯಿ ನೀರೂರುವವು, ಚೆನ್ನಾಗಿ ಎಲ್ಲರಿಗೂ ಒಂದಲ್ಲ ಒಂದು ಪದಾರ್ಥದಲ್ಲಿ ಆಸಕ್ತಿ ಉಂಟಾಗುವಂತೆ ವರ್ಣಿಸಲಾಗಿದೆ.

ಇವನ್ನೆಲ್ಲಾ ಮಹಾಲಕ್ಷ್ಮಿಗೆ ನೈವೇದ್ಯಮಾಡಿ, ಶುದ್ಧ ಸುಣ್ಣ ಎಲೆ ಅಡಿಕೆ, ಯಾಲಕ್ಕಿ ಪತ್ರೆಕಾಯಿ, ಲವಂಗ, ಕಾಚುಗಳನ್ನು ಕೂಡಿಸಿದ ವೀಳ್ಯವನ್ನು ಅರ್ಪಿಸಿದರು.

ಇಲ್ಲಿ ಕನ್ನಡಿಗರ ಸಂಪತ್ ಹಾಗೂ ಸಮೃದ್ಧ ತೃಪ್ತ ಜೀವನ, ರಸನದ ರಸಾಸ್ವಾದನೆ, ರಸಿಕತನ, ಎಲ್ಲವನ್ನೂ ಆ ದೇವಿಗೆ ಅರ್ಪಿಸಿ, ಆ ನೈವೇದ್ಯವನ್ನು ಭುಂಜಿಸುವ ಸಂಸ್ಕೃತಿಯು ಎಷ್ಟು ಚೆನ್ನಾಗಿ ಮೂಡಿಬಂದಿದೆ;

ಮಾರನೆಯ ದಿನ ಸಂಪತ್ತು ಶನಿವಾರದ ಅಡಿಗೆ ಬಹಳ ಸರಳವಾದುದು. ಕಡುಬು, ಅಂಬಲಿ, ಪರಮಾನ್ನ,

ಮೊದಲನೆಯ, ಎರಡನೆಯ ಶುಕ್ರವಾದ ಆ ಮುತ್ತೈದೆ ಬರಲಿಲ್ಲ. ಮೂರನೇವಾರ ಇನ್ನೊಬ್ಬ ಸೊಸೆ ಹೋದಾಗ ಯಥಾಪ್ರಕಾರ ಅದೇ ಮುತ್ತೈದೆ ಹಾಜರಾಗಿ, 'ಕಡಲೆ ಹೂರಣದ ಕರಿಗಡುಬನ್ನು ಮಾಡು ಬರುತ್ತೇನೆ' ಎನ್ನುತ್ತಾಳೆ, ಆದರ ಹದ ಬೇಕಲ್ಲ! ಕಡಲೆಹೂರಣ, ಗಸಗಸೆ, ಕೊಬ್ಬರಿ, ದ್ರಾಕ್ಷೆ, ಉತ್ತತ್ತಿಹರಳು, ಕಲ್ಲುಸಕ್ಕರೆ ಕಲೆಸಿ, ಬೆಣ್ಣೆಕಾಸಿದ ತುಪ್ಪದಲ್ಲಿ ಕರಿದು ಕರಿಗಡುಬನ್ನು ಮಾಡುತ್ತಾರೆ.

ನಾಲ್ಕನೇವಾರ ಹಿರಿಯ ಸೊಸೆ ಕರೆಯಲು ಹೋಗುತ್ತಾಳೆ, ಹಾಜರಾದ ಮುತ್ತೈದೆಯನ್ನು ಲಕ್ಷಿಸುವುದಿಲ್ಲ ಆಗ ಆಕೆ 'ಹಿರಿಯ ಸೊಸೆ ಎಂಬ ಗರುವ ಅಹಂಕಾರ ನಿನಗೆ. ಎದುರಿಗೆ ಬಂದ ನನ್ನನ್ನು ಬಿಟ್ಟು, ಬೇರೆಯವರನ್ನು ಕರೆಯಲು ಹೋಗುತ್ತೀಯಲ್ಲಾ?'. ಹಿರಿಯ ಸೊಸೆ ಹೇಳುತ್ತಾಳೆ 'ನೀನು ಮೂರುವಾರವೂ ಬರುತ್ತೇನೆಂದು ತಪ್ಪಿಸಿಕೊಂಡಿದ್ದೀ, ನಿನ್ನ ಮನೆ ಎಲ್ಲಿದೆ ಹೇಳು.' ಆದಕ್ಕೆ ಆ ಮುತ್ತೈದೆ ಹೇಳುತ್ತಾಳೆ "ದೂರುಂಟು ನಮ್ಮನಿ, ದಾರಿಗಸಾಧ್ಯವು ನೋಡಿಬಂದವರು ದಾರಿಲ್ಲ, ಆಹಾರ ನಿದ್ರೆ ಸಂಸಾರ ಸಮುದ್ರವು ಮೀರಿದವರಿಗೆ ಕಾಂಬುವುದು".

ಈ ಮಾತುಗಳ ಧ್ವನಿಯಿಂದ ಆ ಮಾಯಾವಿ ಮುತ್ತೈದೆ ಸಾಕ್ಷಾತ್ ಮಹಾಲಕ್ಷ್ಮಿಯೇ ಎಂಬುದನ್ನು ಭೀಮವ್ವ ತೋರಿಸಿದ್ದಾಳೆ.

ನಾಲ್ಕನೇವಾರವೂ ಆ ಮುತ್ತೈದೆ ಬರಲಿಲ್ಲ. ಐದನೇವಾರ ಆ ಬ್ರಾಹ್ಮಣನ ಹೆಂಡತಿಯೇ ಹೊರಡುತ್ತಾಳೆ. ಮತ್ತೆ ಆ ಮುತ್ತೈದೆ ಎದುರಿಗೆ ಬಂದು ತನ್ನನ್ನೇ ಕರೆಯುಂತೆ ಬಲಾತ್ಕಾರ ಮಾಡುತ್ತಾಳೆ. ಬ್ರಾಹ್ಮಣನ ಹೆಂಡತಿ ಜಗ್ಗುವುದಿಲ್ಲ. ಆಗ ಆಕೆ– 'ಇಕ್ಷುಮೇಲೆ ಜೇನು ಇಟ್ಟಂತೆ ಬರುವೆನು, ಲಕ್ಷ್ಮಿಸರಿಗೆ ನಾ ಕೊಡುವೆನು. ಸಾವಕಾಶ ಅಡಿಗೆ ಮಾಡು, ದಿನಕರ ಮುಳಗೋ ಕಾಲಕ್ಕೆ ಬರುತ್ತೇನೆ" ಎನ್ನುತ್ತಾಳೆ.

ಒಂದೆಡೆ ಸಿರಿದೇವಿಯಾದ ಮಹಾಲಕ್ಷ್ಮಿ, ಇನ್ನೊಂದೆಡೆ ದರಿದ್ರ ಬ್ರಾಹ್ಮಣನ ಹೆಂಡತಿ ಇವರ ನಡುವೆ ಸಂಭಾಷಣೆ ಹೀಗೆ ಸಾಗುತ್ತದೆ.

ಲಕ್ಷ್ಮಿ: ಅಂಗಳ ಸಾರಿಸು, ರಂಗುತೋರಣ ಕಟ್ಟು, ರಂಗವಲ್ಲಿಯ ಚಿತ್ರ ಬರೆದು ಅಂಬರೂದಿನ ಕಡ್ಡಿಹಚ್ಚು, ಅರಮನೆ ಬಾಗಿಲ ಮುಂದೆ ಒಂದು ಹಿಲಾಲನ್ನು ನೆಡಿಸು.

ಬ್ರಾಹ್ಮಣಿತಿ : ಅರಮನೆಯಲ್ಲ, ನಾವಿರುವುದು ಮೂರಂಕಣ ಮನೆ, ಮುಂದೆ ಮುರುಕು ಚಪ್ಪರ.

ಲ : ನೀನು ಈ ಮಡಿಸೀರೆಯನ್ನು ಬಿಟ್ಟು, ಮಡಿಪೀತಾಂಬರವುಟ್ಟು ಕೈಯಲ್ಲಿ ಕಡಗ ಕಂಕಣ ಧರಿಸು, ಮುತ್ತಿನ ಮುಖುರೆ ಇಟ್ಟುಕೋ, ಅಡ್ಡಿಕೆ ಹಾಕಿಕೋ, ಹೊಳೆಯುವ ಬುಗುಡಿ ಬಾವಲಿ ಧರಿಸು, ಕಂಚುಕ, ಕಲಶ, ಕದಲಾರತಿ ತಕ್ಕೊಂಡು ಬಂದು ನನ್ನನ್ನು ಇದಿರುಗೊಳ್ಳು. ಆಗ ನಾನು ಮಿಂಚಿನಂತೆ ಹೊಳೆಯುವ ಚಿನ್ನದ

(12 ನೇ ಪುಟ ನೋಡಿ)

## ಆರ್ಜಿತ ಅಭಿಷೇಕ
## ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನ,ಮಂಗಾಪುರ

### ಆರ್ಜಿತ ಅಭಿಷೇಕಾಸಕ್ತರಿಗೆ ಹೊಸ ಅವಕಾಶ

ಮಂಗಾಪುರದ ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನದಲ್ಲಿ ಮೂಲಮೂರ್ತಿಗೆ ಪ್ರತಿ ಶುಕ್ರವಾರವೂ ಸರ್ಕಾರ್ ಆರ್ಜಿತ ಅಭಿಷೇಕವನ್ನು ಏರ್ಪಡಿಸಲು ಯೋಜಿಸಲಾಗಿದೆ. ರೂ 100/–ಗಳ ಟಿಕೆಟ್ಟನ್ನು ಪಡೆದ ಇಬ್ಬರಿಗೆ ಹಾಲಿನ ತಂಬಿಗೆಗಳೊಂದಿಗೆ ವಿಮಾನ ಪ್ರಾಕಾರದಲ್ಲಿ ಪ್ರದಕ್ಷಿಣೆಗೂ ಅಭಿಷೇಕ ದರ್ಶನಕ್ಕೂ ಅವಕಾಶ ನೀಡಲಾಗುತ್ತದೆ. ಆಸ್ತಿಕ ಭಕ್ತರು ಈ ಅವಕಾಶವನ್ನು ಬಳಸಿಕೊಂಡು ಕೃತಾರ್ಥರಾಗಬೇಕಾಗಿ ವಿನಂತಿ.

# ಮೂರು ವರುಷದ ಬುದ್ಧಿ........

ಶ್ರೀ ಕೆ.ಎಂ. ಅಚ್ಯುತಕುಮಾರ ಎಂ.ಎ;

ಮಕ್ಕಳ ಗುಣಗಳ ಬೆಳವಣಿಗೆಯು ಬೀಜಾರೋಪಣೆ ಅಬೋಧರಾಗಿರುವಾಗಲೇ ಆರಂಭವಾಗುತ್ತದೆ. ಅಂದರೆ "ಮಕ್ಕಳ ಇಸ್ಕೂಲ್ ಮನೇಲಲ್ವೇ" ಎಂದ ಹಾಗೆ ಮಕ್ಕಳು ಮನೆಯಲ್ಲಿ ಬೆಳೆಯುವುದರೊಂದಿಗೆ ಗುಣಗಳ ಬೆಳವಣಿಗೆಪ್ರಾರಂಭವಾಗುತ್ತದೆ ಎಂದರ್ಥ. ಈ ಗಹನತತ್ತ್ವವನ್ನು ಅರಿಯದ ಎಷ್ಟೋ ಮಾತಾಪಿತೃಗಳು ಮಗು ಬೆಳೆದು ದೊಡ್ಡದಾದ ಮೇಲೆ ಎಲ್ಲವನ್ನು ಸ್ವತಃ ತಾನೇ ತಿಳಿದುಕೊಳ್ಳುತ್ತದೆಯೆಂದು, ಬಾಲಕರನ್ನು ಚಿಕ್ಕವಯಸ್ಸಿನಲ್ಲೇ ತಿದ್ದುವ ಪ್ರಯತ್ನ ಅವಶ್ಯಕತೆಯಿಲ್ಲವೆಂದು ಶುದ್ಧ ತಪ್ಪಾಗಿ ತಿಳಿಯುತ್ತಾರೆ. ಆದ್ದರಿಂದ ಅವರು ಆ ಕಾರ್ಯವನ್ನು ಬಿಟ್ಟು ಅವರನ್ನು ಪ್ರೀತಿಯಿಂದ ಬೆಳೆಸಲು, ಅವರ ಆಸೆಗಳನ್ನು ಪೂರ್ತಿಮಾಡಲು ಪ್ರಯತ್ನಿಸುತ್ತಾರೆ; ಮಗ್ನರಾಗುತ್ತಾರೆ. ತಂದೆತಾಯಿಗಳು ಬಾಲಕರ ಭಾವೀ ಜೀವನದ ಅಡಿಪಾಯವನ್ನು ಬಾಲ್ಯದಲ್ಲಿಯೇ ಸರಿಪಡಿಸಿ ಗಟ್ಟಿಮಾಡಬೇಕಾಗಿದೆ. ಬಾಲ್ಯಾವಸ್ಥೆಯು ಬಾಲಕರ ಶೀಲರಚನೆಗೆ ಬಹು ಮುಖ್ಯವಾದ ಪರ್ವಕಾಲ; ಸುವರ್ಣಕಾಲ. ಏಕೆಂದರೆ ಬಾಲ್ಯದ ಎಲ್ಲ ವಿಷಯಗಳು ಬಾಲಕನ ಭವಿಷ್ಯತ್ ಜೀವನದಲ್ಲಿ ಗಾಢವಾದ ಪ್ರಭಾವವನ್ನುಂಟುಮಾಡುತ್ತವೆ. ಬಾಲ್ಯದಲ್ಲಿ ಬರುವ ಸುಖ-ದುಃಖ, ಕಷ್ಟ-ಸುಖ, ಪ್ರಸನ್ನತೆ, ಪ್ರಮಾಣಿಕತೆ, ನೈರ್ಮಲ್ಯ ಮತ್ತು ಯೋಗ್ಯತೆ–ಇವೇ ಮುಂತಾದ ಗುಣಗಳು ಬಾಲಕರ ಜೀವನದಲ್ಲಿ ಅಭ್ಯಾಸವಾಗಿ ಬೇರೂರಿ ಬೆಳವಣಿಗೆಯಾಗುತ್ತವೆ. ಒಳ್ಳೆಯ ಗುಣಗಳು ಚಿಕ್ಕಂದಿನಲ್ಲಿಯೇ ಮೊಳೆಯದಿದ್ದರೆ, ದೊಡ್ಡವರಾದಮೇಲೆ ಅವು ವಿಕಾಸವಾಗುವುದಿಲ್ಲ. "ಮೂರು ವರುಷದ ಬುದ್ಧಿ ನೂರು ವರುಷದ ತನಕ" ಎನ್ನುವ ಗಾದೆಯ ಮಾತನ್ನು ನಾವು ಕೇಳಿಲ್ಲವೆ? "ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ" ಎನ್ನುವ ಗಾದೆಯನ್ನೂ ನೆನಪಿಸಿಕೊಳ್ಳಿ. ಆದಕಾರಣ ಬಾಲಕರಿಗೆ ವಯಸ್ಸಾದ ಮೇಲೆ ಕಲಿಸುವುದಕ್ಕೆ ಬದಲಾಗಿ ಶೈಶವಾವಸ್ಥೆಯಲ್ಲಿಯೇ ಸದ್ಗುಣಗಳನ್ನು ಕಲಿಸುವ ಅಭ್ಯಾಸವನ್ನು ತಂದೆತಾಯಿಗಳು ಬೆಳೆಸಿಕೊಳ್ಳಬೇಕು.

ಕುಟುಂಬದಲ್ಲಿ ಮಗು ಮೊದಲು ಬೆಳೆಯುವುದು ತಾಯಿಯೊಡನೆ. ಕೈಲಾಸಂ ಅವರು ಹೇಳಿರುವಂತೆ ಮಕ್ಕಳಿಗೆ ಮನೆಯೇ ಮೊದಲ ಶಾಲೆ ತಾನೆ? ಅಲ್ಲಿ ತಾಯಿಯೇ ಮೊದಲ ಗುರು. ಆದ್ದರಿಂದ ಮಕ್ಕಳು ಒಳ್ಳೆಯ ಹುಡುಗರಾಗುವಂತೆ ಮತ್ತು ಎಲ್ಲರೂ ಪ್ರೀತಿಸುವಂತೆ ಮಾಡುವ ಮೊದಲ ಕರ್ತವ್ಯ ತಾಯಿಯದಾಗಿರುತ್ತದೆ. ಬಾಲಕರಲ್ಲಿ ದುರ್ಗುಣಗಳ ಅಂಕುರವಾಗುವುದು ಅಕ್ಕಪಕ್ಕದ ಕೆಟ್ಟವ್ಯಕ್ತಿಗಳು, ಕೆಟ್ಟ ಹುಡುಗರು ಮತ್ತು ಮನೆಯಲ್ಲಿರುವ ದುಷ್ಟವ್ಯಕ್ತಿಗಳಿಂದ. ಆದ್ದರಿಂದ ಅಂತಹವರೊಡನೆ ಸಹವಾಸ ಮಾಡಲು ಮಕ್ಕಳನ್ನು ಬಿಡಬಾರದು. ಚಿಕ್ಕ ಮಕ್ಕಳ ವ್ಯಕ್ತಿತ್ವ ಒಳ್ಳೆಯದಾಗಬೇಕಾದರೆ ಒಳ್ಳೆಯ ವ್ಯಕ್ತಿತ್ವವಿರುವ ವ್ಯಕ್ತಿಗಳ ಸಹವಾಸ ಅತ್ಯವಶ್ಯಕ.

ತಂದೆ ತಾಯಿಗಳು ತಮ್ಮ ಮಕ್ಕಳು ಸದಾ ಸುಪ್ರಸನ್ನ ಚಿತ್ತರಾಗಿರುವಂತೆ ನೋಡಿಕೊಳ್ಳಬೇಕು. ಅವರಿಗೆ ಈ ಗುಣ ಬಾಲ್ಯಾವಸ್ಥೆಯಿಂದಲೇ ಬೆಳೆದು ಬರುವಂತೆ ನೋಡಿಕೊಳ್ಳಬೇಕು. ಇದಕ್ಕೆ ಮನೆಯ ಹಿರಿಯರು ಸುಪ್ರಸನ್ನ ಚಿತ್ತರಾಗಿ ನಾಸಿಸಬೇಕು. ಮನೆಯ ಹಿರಿಯರು ಪ್ರಸನ್ನ ಚಿತ್ತರಾಗಿದ್ದು ಮಕ್ಕಳೊಡನೆ ಪ್ರೇಮ ಪೂರ್ವಕವಾಗಿ ವ್ಯವಹರಿಸುವುದರಿಂದ ಮಕ್ಕಳಲ್ಲಿ ಮೇಲಿನ ಗುಣ ಬೆಳೆಯಲು ಸಾಧ್ಯವಾಗುತ್ತದೆ. ಕಾರಣ ಎಲ್ಲರಿಗಿಂತ ಹೆಚ್ಚಾಗಿ ಮಕ್ಕಳಲ್ಲಿ ಅನುಕರಣ ಪ್ರವೃತ್ತಿ ಅತಿಯಾಗಿರುತ್ತದೆ. ಮನೆಯವರ ಅದರಲ್ಲೂ ತಂದೆತಾಯಿಗಳ ಈ ಗುಣ ಮಕ್ಕಳಲ್ಲಿ ಬಹುಬೇಗ ಅಭ್ಯಾಸವಾಗಿ ಬಂದು ಬಿಡುತ್ತದೆ. ಏಕೆಂದರೆ ಚಿಕ್ಕ ಮಕ್ಕಳು ತಂದೆ ತಾಯಂದಿರನ್ನು ಅರಿಯದೆ ಅನುಕರಣೆ ಮಾಡಿ ಮೈಗೂಡಿಸಿಕೊಳ್ಳುವಷ್ಟು ಬೇಗ ಇನ್ನಾರನ್ನೂ ಅನುಕರಣೆ ಮಾಡುವುದಿಲ್ಲ; ಅಷ್ಟೇ ಅಲ್ಲದೆ ಮಕ್ಕಳ ವ್ಯಕ್ತಿತ್ವ ತಂದೆತಾಯಿಗಳ ರೀತಿ–ನೀತಿಗಳನ್ನೇ ಅವಲಂಬಿಸಿರುತ್ತದೆ.

ತಂದೆತಾಯಿಗಳು ಚಿಕ್ಕಂದಿನಿಂದಲೂ ಹುಡುಗರ ಸ್ವಾತಂತ್ರ್ಯ ಪ್ರಿಯತೆಗೆ ಊನ ಬರದಂತೆ ಬೆಳೆಸಬೇಕು. ನಿಯಮಿತ ಕಾಲದಲ್ಲಿ ಹುಡುಗರು ಎಲ್ಲ ಕೆಲಸಗಳನ್ನು ಮಾಡುವ ಅಭ್ಯಾಸ ಮಾಡಿಸಬೇಕು. ಮಕ್ಕಳಿಗೆ ಯಾವ ಕಾರ್ಯವೂ ಅನಿಯಮಿತ ರೂಪದಲ್ಲಿರಬಾರದು. ಇದರಿಂದ ಮುಂದೆ ಮಕ್ಕಳು ನಿಯಮಿತ ರೂಪದಲ್ಲಿ ಕಾರ್ಯಗಳನ್ನು ಮಾಡುವ ಸಾಮರ್ಥ್ಯವನ್ನು ಪಡೆಯುತ್ತಾರೆ ಮಕ್ಕಳು ಯಾವಾಗಲೂ ಯಾವುದಾದರೂ ನೆಪದಿಂದ ಅಳುತ್ತಿರುತ್ತಾರೆ. ಸಾಧ್ಯವಾದಷ್ಟು ಮಟ್ಟಿಗೆ ಮಕ್ಕಳು ಅಳದಂತೆ ಮತ್ತು ಹಠಹಿಡಿಯದಂತೆ ನೋಡಿಕೊಳ್ಳಬೇಕು. ಇಲ್ಲದೇ ಹೋದರೆ ಮಕ್ಕಳು ಅಳುವ ಮತ್ತು ಹಠ ಹಿಡಿಯುವ ಸ್ವಭಾವಕ್ಕೆ ಪಕ್ಕಾಗುತ್ತಾರೆ. ಸಭ್ಯತೆ, ವಿನಯ, ಸುಶೀಲ, ಸದಾಚಾರ ನಿಯಮಗಳನ್ನು ಬಾಲಕರಿಗೆ ಬಾಲ್ಯದಲ್ಲಿಯೇ ಕಲಿಸಬೇಕು. ಮಕ್ಕಳ ಇದಿರಿನಲ್ಲಿ ತಂದೆತಾಯಿಗಳು ಇತರರನ್ನು ಬಯ್ಯುವುದಾಗಲಿ, ಕಠೋರಶಬ್ದಗಳನ್ನು ಹೇಳುವುದಾಗಲಿ ಮಾಡಬಾರದು. ಏಕೆಂದರೆ ಅವರಲ್ಲಿ ಅನುಕರಣ ಪ್ರವೃತ್ತಿ ಹೆಚ್ಚಾಗಿರುತ್ತದೆ. ಅಷ್ಟೇ ಅಲ್ಲ; ವ್ಯಕ್ತಿ ತಾನು ಬೆಳೆಯುತ್ತಿರುವ ಪರಿಸ್ಥಿತಿಗೆ ಅನುಗುಣವಾಗಿ ಅನುಭವವನ್ನು ಪಡೆಯುತ್ತಾನೆ,

ತಂದೆತಾಯಿಗಳು ಮಕ್ಕಳಿಗೆ ಸ್ವಾವಲಂಬನ ಕಾರ್ಯವನ್ನು ಕಲಿಸಬೇಕು. ಬಾಲಕರು ಬೆಳೆದಂತೆ ಪರಾಧೀನತೆಯಿಂದ ಬಿಡುಗಡೆ ಹೊಂದುವಂತೆ ಮಾಡಬೇಕು. ಎಷ್ಟು ಸಾಧ್ಯವೋ ಅಷ್ಟರ ಮಟ್ಟಿಗೆ ಮಕ್ಕಳು ತಮ್ಮ ಕಾರ್ಯವನ್ನು ತಾವೇ ಮಾಡುವಂತೆ ನೋಡಿಕೊಳ್ಳಬೇಕು. ಕಾರಣ ಮಕ್ಕಳು ಚಿಕ್ಕಂದಿನಿಂದಲೂ ಸ್ವಾತಂತ್ರ್ಯವನ್ನು ಅಪೇಕ್ಷಿಸುವುದು ಪ್ರಕೃತಿದತ್ತವಾಗಿದೆ. ಮಕ್ಕಳು ತಮ್ಮ ಕಾರ್ಯವನ್ನು ತಾವೇ ಮಾಡುವಂತೆ ಬೆನ್ನು ತಟ್ಟಿ ಪ್ರೋತ್ಸಾಹಿಸಬೇಕು. ಅತಿ ಅವಶ್ಯಕತೆ ಎನ್ನುವವರೆಗೂ ಅವರಿಗೆ ತಂದೆತಾಯಿಗಳು ಸಹಾಯ ಮಾಡಬಾರದು. ಸಾಧ್ಯವಾದರೆ ಸ್ವತಂತ್ರರಾಗಿ ಬೆಳೆಯಲು ಅವಕಾಶಗಳನ್ನು ತಂದೆತಾಯಿಗಳು ಕಲ್ಪಿಸಿಕೊಡಬೇಕು. ಹುಡುಗರು ಶಿಕ್ಷೆಯ ಭಯದಿಂದ ತಮ್ಮ ತಪ್ಪನ್ನು ತಪ್ಪಿಸಿ, ಸುಳ್ಳಿನ ಕಥೆಯನ್ನೇ ತಂದೆತಾಯಿಗಳಿಗೆ ಹೇಳುತ್ತಾರೆ. ಇದರಿಂದ ಹುಡುಗರಲ್ಲಿ ದುರಭ್ಯಾಸ ಮನೆ ಮಾಡುತ್ತದೆ. ಆದ್ದರಿಂದ ಮಕ್ಕಳು ತಮ್ಮ ತಪ್ಪನ್ನು ಹೇಳಿ, ಒಪ್ಪಿಕೊಂಡರೆ ಅವರಿಗೆ ಶಿಕ್ಷೆ ಕೊಡದೆ, ಪುನಃ ಅಂತಹ ತಪ್ಪನ್ನು ಮುಂದೆ ಮಾಡದಂತೆ ಎಚ್ಚರಿಕೆ ಕೊಡಬೇಕು. ಎಲ್ಲಕ್ಕಿಂತಲೂ ಮೊದಲು ತಂದೆತಾಯಿಗಳು ನೆನಪಿನಲ್ಲಿಟ್ಟುಕೊಳ್ಳಬೇಕಾದ ವಿಷಯವೆಂದರೆ, ಮಕ್ಕಳ ವಿಷಯದಲ್ಲಿ ಯಾವುದರಲ್ಲೂ ಅತಿಯಾಗಿರದೆ, ಕಡಿಮೆಯಾಗಿರದೆ ಮಧ್ಯವರ್ತನೆಯಿಂದ ಅನುಸರಿಸುವುದು.

———

(10 ನೇ ಪುಟದಿಂದ)

ಹಲಿಗೆಯ ತೂಗೋ ಮಂಚದಿ ಬಂದು ಕೊಡುವೆನು.

ಬ್ರಾ : ಅಮ್ಮಾ, ಭಂಗಾರವೆಂಬುದು ಕಂಗಳು ಕಂಡಿಲ್ಲ, ಈ ಮಾಂಗಳಸೂತ್ರ ಒಂದ್ಹೊರತು. ನನ್ನಬಳಿ ಮಡಿಸೀರೆ ಬಿಟ್ಟರೆ ಇನ್ನೊಂದು ಸೀರೆ ಇಲ್ಲ, ಮಡಿಪೀತಾಂಬರ ಎಂದರೆ ಏನೋ ಗೊತ್ತಿಲ್ಲ, ಕಡಗವಿಲ್ಲ, ಕಂಕಣವಿಲ್ಲ, ಕರಿಯ ಗಾಜಿನ ಬಳೆಗಳನ್ನು ಮಾತ್ರ ತೊಟ್ಟಿದ್ದೇನೆ, ನಮ್ಮಲ್ಲಿರುವುದು ಮರದ ಮಣೆ, ಹಲಿಗೆಯ ತೂಗು ಮಂಚವನ್ನು ಎಲ್ಲಿಂದ ತರಲಿ ?

ಲಕ್ಷ್ಮಿ : ಭಂಗಾರದ ಬಾಳೆಎಲೆ, ಬೆಳ್ಳಿಬಟ್ಟಲು ಮಂಡಿಗೆ ಸಕ್ಕರೆತುಪ್ಪ ಉಂಡು ಕೊಡುವೆನು. ಆಗ ನೀನು ಕುಂದಣಕೆತ್ತಿದ ತಬಕಿನಲಿ ತಂದು ನೀಡೆನಗೆ ತಾಂಬೂಲ.

ಬ್ರಾ : ಅಮ್ಮಾ, ನಾನು ಹುಟ್ಟಿದ ಲಾಗಾಯ್ತು ಇದುವರೆಗೆ ನನ್ನ ಬಟ್ಟನಲ್ಲಿ ( ಬೆರಳಲ್ಲಿ ) ಎಲೆಗೆ ಸುಣ್ಣವನ್ನು ಹಚ್ಚಿಕೊಂಡು ಅರಿಯೆ, ಅಂಥದ್ದರಲ್ಲಿ ನೀನು ಹೇಳುವ ಕರ್ಪೂರ ಅಡಿಕೆ, ಮುತ್ತಿನಸುಣ್ಣ, ಬಿಳಿ ಎಲೆಯನ್ನು ಎಲ್ಲಿಂದ ತರಲಿ, ನಮ್ಮಲ್ಲಿ ಭಂಗಾರದ ತಬಕು ಎಲ್ಲಿಂದ ಬರ ಬೇಕು. ತುಂಡಾದ ಹಿತ್ತಾಳೆ ತಾಟೊಂದಿದೆ ಅಷ್ಟೆ.

ಲ : ಬುಟ್ಟಿದ ಬುಗುಡಿ ಅಂಚು ಜರತಾರಿ ಚಿನ್ನದಿ ಥಳಕಿಸುವ ಕುಪ್ಪಸ ಹೊಲಿಸಿಕೊಟ್ಟರೆ ಒಂದರೆಕ್ಷಣ ತೊಟ್ಟು ನಿಮಗೆ ಕೊಟ್ಟು ಬಿಡುವೆ.

ಬ್ರಾ : ಅಮ್ಮಾ, ನಾವು ಹುಟ್ಟು ಬಡವರು, ಅಷ್ಟದರಿದ್ರರು, ನಿತ್ಯಯಾತ್ರೆಯಲ್ಲಿ ಬದುಕುವವರು ಇದನ್ನು ಚಿತ್ತಕ್ಕೆ ತಂದು ನೀ ದಯಮಾಡಿಬಾ, ಎಂದು ಹಸ್ತವ ಮುಗಿದು ಕೇಳಿಕೊಂಡಳು.

ಸೂರ್ಯನು ಅಸ್ತನಾಗುವ ಕಾಲವನ್ನು ನಿರೀಕ್ಷಿಸಿ ನಂತರ ಲಕ್ಷ್ಮಿಯು;

ಬಳ್ಳಿಯಂತೆ ನಡೆದು ಬರುತ್ತಿರುವಾಗ ಬೀದಿಯ ಜನರು, 'ಈಕೆ ಯಾರೋ, ಎಲ್ಲಿಂದ ಬಂದಳೋ? ಇವಳನ್ನು ನೋಡಿದೊಡನೆಯೇ ಆ ಸೌಂದ ರ್ಯಕ್ಕೆ ಮಾರುಹೋಗಿ ಮೂರ್ಛೆಬರುತ್ತದೆ' ಎಂದು ವಿಸ್ಮಯ ಬೆರಗಾಗಿ ನೋಡುತ್ತಿದ್ದರಂತೆ.

ಆಕೆ ಬಂದೊಡನೆಯೇ ಮುರುಕುಮನೆ ಅರ ಮನೆಯಾಗುತ್ತದೆ – ಇತ್ಯಾದಿ. ಆಕೆ ಬಂದೊಡೆ ನೆಯೇ ದೇವರಮನೆಗೆ ಹೋಗಿ ಚೊಕ್ಕ ಚಿನ್ನದ ಕೊಡವಾಗಿ ತೂಗು ಮಂಚದಲ್ಲಿ ಪ್ರತಿಷ್ಠಾಪನ ವಾಗಿ ಬಿಡುತ್ತಾಳೆ. ಎಲ್ಲರೂ ಬಂದು ಆಕೆಯನ್ನು ಪೂಜಿಸುತ್ತಾರೆ, ಉಡಿತುಂಬುತ್ತಾರೆ, ಆರತಿ ಮಾಡುತ್ತಾರೆ, ನಾಲ್ಕುಮಾರ ಬಡಿಸಿಟ್ಟ ಎಲೆಗಳಲ್ಲಿ ಅನ್ನವು ಆಣಿಮುತ್ತಾಗಿರುತ್ತದೆ. ಪಾಕವು ಪಚ್ಚೆ ಯಾಗಿರುತ್ತದೆ, ಪರಮಾನ್ನ ಬಂಗಾರವಾಗಿರು ತ್ತದೆ.

ಈ ವ್ರತವನ್ನು ಮಾಡುವುದು ಹಾಗಿರಲಿ, ಈ ಕತೆಯನ್ನು ಹೇಳಿಕೇಳಿದವರಿಗೇನೇ ಲಕ್ಷ್ಮೀದೇವಿ ಸಾಯುಜ್ಯ ಪದವಿ ಕೊಡುತ್ತಾಳೆ. ಕಿವುಡರಿಗೆ ಕಿವಿ, ಕುರುಡರಿಗೆ ಕಣ್ಣು ಬರುತ್ತವೆ. ಬರಡಾಕಳು ಹೈನಾಗುತ್ತದೆ. ಬಂಜೆ ಮಕ್ಕಳನ್ನು ಪಡೆಯು ತ್ತಾಳೆ, ಇಷ್ಟಫಲಪ್ರಾಪ್ತಿಯಾಗುತ್ತದೆ. ಮಾಂ ಗಲ್ಯ, ಮುತ್ತೈದೆ ಭಾಗ್ಯ ಶಾಶ್ವತವಾಗಿರುತ್ತದೆ. ಎಂಬ ಫಲಶ್ರುತಿಯನ್ನು ಭೀಮವ್ವ ಹೇಳುತ್ತಾಳೆ.

ಭೀಮವ್ವನ ಕೃತಿಗಳಲ್ಲಿ ಕಥೆ, ವ್ರತ, ಆದರ ಆಚರಣೆ, ಸಿದ್ಧಿ ಇದರೊಂದಿಗೆ ನಮ್ಮ ಕನ್ನಡ ನಾಡಿನ ಉದ್ದಗಲದ ಸತ್‍ಸಂಪ್ರದಾಯಗಳು, ಜನಜೀವನದ ರೀತಿ ನೀತಿಗಳು, ದೇಶದ ಸಂಪತ್ತು ಮತ್ತು ಸಮೃದ್ಧಿ, ಜಾನಪದದ ರಸಿಕತೆ, ವಿಲಾಸ, ವಿಭ್ರಮಗಳು, ಜೊತೆಗೆ ಭಕ್ತಿ – ಶ್ರದ್ಧೆಗಳ ಹೊಂದಾಣಿಕೆಯನ್ನು ಕಾಣುತ್ತೇವೆ. ಸುಲಲಿತ ವಾದ ಭಾಷೆ, ನವಿರಾದ ಹಾಸ್ಯ, ಸೊಗಸಾದ ನುಡಿಗಟ್ಟುಗಳು, ತಮಗೆ ತಾವೇ ಬಂದು ನರ್ತನ ಮಾಡುವ ಪ್ರಾಸ, ಗಣಗಳು ಮನ ಮೋಹಕ ವಾಗಿವೆ. ಯಾವುದೇ ಕತೆಯಲ್ಲಾದರೂ ಈಕೆಯ ನಿರೂಪಣೆ ಸೊಗಸಾಗಿರುವುದೇ ಅಲ್ಲದೆ ವಸ್ತು ನಿಷ್ಠವಾಗಿರುತ್ತದೆ.

ಭೀಮವ್ವ ನಾಡಿನ ಉದ್ದಗಲವನ್ನು ಸಂಚರಿ ಸಿರಬೇಕು. ಜಾನಪದವನ್ನು ಅರಿತಿರಬೇಕು. ಶಾಸ್ತ್ರಪುರಾಣಗಳನ್ನು ಚೆನ್ನಾಗಿ ಅಭ್ಯಾಸ ಮಾಡಿ ರಬೇಕು. ಬಹುಶ್ರುತಳಾಗಿರಬೇಕು ಈಕೆಯ ಒಂದೊಂದೂ ಕೃತಿ ರೋಚಕವಾಗಿದೆ, ಮೋಹಕ ವಾಗಿದೆ.

---

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸ ಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿ ಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರೂ 2500 ಹಣ ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿಯುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ. ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಬಿಡಲಾಗುತ್ತದೆ.

ತಿರುಮಲೆ ತಿರುಪತಿ ದೇವಸ್ಥಾನ.

**ಹರಿದಾಸವಾಣಿ**

# ಶ್ರೀ ಜಗನ್ನಾಥ ದಾಸರು

ಹರಿದಾಸ ಕೂಟ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಪ್ರಮುಖ ಪಂಥ (Movement) ವಾದರೆ, ಅವರು ರಚಿಸಿದ ಅಪಾರ ಸಾಹಿತ್ಯ ಒಂದು ಸಾಹಿತ್ಯ ಪ್ರಕಾರ (form of Literature) ಆಗಿದೆ. ಕನ್ನಡ ಸಾಹಿತ್ಯದ ಬೆಳವಣಿಗೆಗೆ ತಮ್ಮದೇ ಆದ ಶ್ರೇಷ್ಠವಾದ ಕಾಣಿಕೆಯನ್ನು ಹರಿದಾಸರು ನೀಡಿ ಅನೇಕರ ಆತ್ಮೋದ್ಧಾರಕ್ಕೂ ಆ ಮೂಲಕ ಕಾರಣರಾಗಿದ್ದಾರೆ. ಸಂಶೋಧನ ಚಕ್ಷುವಿಗೆ ಸದ್ಯಕ್ಕೆ ಕಂಡಿರುವ ಸುಮಾರು ಇನ್ನೂರು ಮಂದಿ ಹರಿದಾಸರು ರಚಿಸಿರುವ ಸಾಹಿತ್ಯ ಸಾವಿರಾರು ಸಂಕೀರ್ತನೆಗಳ ರಾಶಿಯಾಗಿದೆ. ಅವರಲ್ಲಿ ಏಳೆಂಟು ಮಂದಿ ತುಂಬ ಪ್ರಸಿದ್ಧರಾದವರಿದ್ದಾರೆ. ಶ್ರೀಪಾದರಾಜರು, ವ್ಯಾಸರಾಜರು, ವಾದಿರಾಜರು ವ್ಯಾಸತತ್ತ್ವಜ್ಞರು (ಗದ್ವಾಲ್ ತಾಲೂಕಿನ ವೇಣಿಸೋಮಪುರ) ಸಂಸ್ಕೃತ, ಕನ್ನಡ ಎರಡೂ ಭಾಷೆಗಳಲ್ಲಿ ಗ್ರಂಥರಚನೆ ಮಾಡಿದವರು. ಪುರಂದರದಾಸರು, ಕನಕದಾಸರು, ವಿಜಯದಾಸರು. ಗೋಪಾಲದಾಸರು, ಪ್ರಸನ್ನ ವೆಂಕಟದಾಸರು, ಮೋಹನದಾಸರು, ಜಗನ್ನಾಥದಾಸರು, ಪ್ರಾಣೇಶದಾಸರು, ಕರ್ಜಗಿದಾಸರು ಮೊದಲಾದವರು ಕನ್ನಡ ಹರಿದಾಸ ಸಾಹಿತ್ಯವನ್ನು ವಿಶೇಷವಾಗಿ ಬೆಳೆಸಿದವರು. ಇವರಲ್ಲಿ ದಾಸಚತುಷ್ಟಯನ್ನು ಎರಡು ಬಗೆಯಾಗಿ ಹೇಳುವುದುಂಟು.

ನಮಃ ಶ್ರೀಪಾದರಾಜಾಯ
ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ
ವಿಜಯಾರ್ಯಾಯ ತೇ ನಮಃ

ಎಂದು ನಾಲ್ವರನ್ನು ಸ್ಮರಿಸುವುದು ಒಂದು ಬಗೆಯಾದರೆ, ಹರಿದಾಸ ಚತುಷ್ಟಯ ಎಂದು ಪುರಂದರದಾಸರು, ವಿಜಯದಾಸರು, ಗೋಪಾಲದಾಸರು ಮತ್ತು ಜಗನ್ನಾಥ ದಾಸರನ್ನು ಕರೆಯುವುದು ಮತ್ತೊಂದು ವಾಡಿಕೆ.

ಕ್ರಿ.ಶ. ಹದಿನೈದು ಹದಿನಾರನೆಯ ಶತಮಾನಗಳಲ್ಲಿ ವಿಜಯನಗರ ಚಕ್ರಾಧಿಪತ್ಯದ ರಾಜಧಾನಿ ವಿಜಯನಗರದಲ್ಲಿ (ಹಂಪೆ) ವ್ಯಾಸರಾಜರ ನೇತೃತ್ವದಲ್ಲಿ ಬೆಳೆದ ಹರಿದಾಸ ಪಂಥ ಮುಂದೆ ೧೭-೧೮ನೆಯ ಶತಮಾನಗಳಲ್ಲಿ ರಾಯಚೂರು ಜಿಲ್ಲೆಯಲ್ಲಿ ವಿಶೇಷವಾಗಿ ವಿಜಯದಾಸರ ಹಿರಿತನದಲ್ಲಿ ಹಿರಿದಾಗಿಯೇ ಬೆಳೆಯಿತು.

**ಡಾ॥ ಕೆ. ಎಂ. ಕೃಷ್ಣರಾವ್**

ಹರಿದಾಸ ಚತುಷ್ಟಯದಲ್ಲಿ ಕೊನೆಯವರಾದ ಜಗನ್ನಾಥದಾಸರನ್ನು ಕುರಿತ ಕಿರು ಲೇಖನವಿದಾದುದರಿಂದ ಇಷ್ಟು ಹಿನ್ನೆಲೆಯಾಗಿ ಹೇಳಿ ದಾಸರ ಜೀವನ–ವ್ಯಕ್ತಿತ್ವ–ಕೃತಿಕಾಣಿಕೆಗಳ–ಬಗೆಯನ್ನು ವಿವರಿಸಬಹುದಾಗಿದೆ.

ರಾಯಚೂರು ಜಿಲ್ಲೆಯ ಮಾನ್ವಿ ತಾಲ್ಲೂಕಿನ ಬ್ಯಾಗವಟ್ಟಿ ಎಂಬ ಗ್ರಾಮದಲ್ಲಿ ನರಸಿಂಹದಾಸ-ಲಕ್ಷ್ಮೀಬಾಯಿ ದಂಪತಿಗಳ ಏಕಮಾತ್ರ ವರಪುತ್ರನಾಗಿ ಸಪ್ತಗಿರಿಯ ಶ್ರೀ ಶ್ರೀನಿವಾಸನ ಕೃಪೆಯಿಂದ 27–7–1728 ರಂದು ಜನಿಸಿದ ಶಿಶುವಿಗೆ ಶ್ರೀನಿವಾಸ ಎಂದೇ ನಾಮಕರಣವಾಯಿತು. ವಿಜಯದಾಸರ ಶಿಷ್ಯವರರಾದ ದಿವಾನ್ ತಿಮ್ಮಣ್ಣಯ್ಯನವರ ಶಿಷ್ಯರು ನರಸಿಂಹದಾಸರು. ಬಾಲ್ಯದಲ್ಲಿ ತಂದೆಯಿಂದಲೇ ವಿದ್ಯಾಭ್ಯಾಸ ನಡೆದು ಅನಂತರ ಹತ್ತಿರದಲ್ಲೇ ಇದ್ದ ಮಂತ್ರಾಲಯ ಮಠಕ್ಕೆ ಮುಂದಿನ ವಿದ್ಯಾಭ್ಯಾಸಕ್ಕಾಗಿ ಬಾಲಕನನ್ನು ಕಳಿಸಲಾಯಿತು. ಅಲ್ಲಿ ಅಂದಿನ ಪೀಠಾಧಿಪತಿಗಳಾಗಿದ್ದ ಶ್ರೀವರದೇಂದ್ರ ತೀರ್ಥ ಶ್ರೀಪಾದಂಗಳವರ ನೇತೃತ್ವದಲ್ಲಿ ಶಾಸ್ತ್ರಾಭ್ಯಾಸಂಗ ಸಾಂಗವಾಗಿ ನಡೆದು ಶ್ರೀನಿವಾಸನು ತುಂಬ ಬುದ್ಧಿವಂತನಾಗಿದ್ದುದರಿಂದ ಶ್ರೀಗಳವರ ಕೃಪಾಪಾತ್ರನಾಗಿ ಪ್ರೌಢ ವಿದ್ಯಾಪಾರಂಗತನಾಗಿ 'ಆಚಾರ್ಯ' ಪಟ್ಟವನ್ನು ಪಡೆದು ಬ್ಯಾಗವಟ್ಟಿಯನ್ನು ತೊರೆದು ಅದಕ್ಕಿಂತ ದೊಡ್ಡದಾದ ತಾಲ್ಲೂಕಿನ ಮುಖ್ಯ ಸ್ಥಳವಾದ ಮಾನ್ವಿಯಲ್ಲಿ ಗುರುಕುಲವನ್ನು ನಡೆಸಿಕೊಂಡು ಬಹುಮಂದಿ ಶಿಷ್ಯರನ್ನು ಆಕರ್ಷಿಸಿ ಪ್ರಸಿದ್ಧನಾದನು.



ಪಂಡಿತ ಶ್ರೀನಿವಾಸಾಚಾರ್ಯರು ಸುಪ್ರಸಿದ್ಧ ಜಗನ್ನಾಥದಾಸರಾದುದು ಸ್ವಾರಸ್ಯವಾದ ಸವಾಡಪೂರ್ಣವಾದ ಕಥೆಯೇ ಸರಿ. ಪ್ರಸಿದ್ಧಿ ಹೆಚ್ಚಾದಂತೆಲ್ಲ ಪಂಡಿತೋಹಂ ಭಾವನೆಯೂ ಅಧಿಕವಾಗುತ್ತ ಬಂದಿತು. ತಂದೆ ಮತ್ತು ಇವರ ಕೆಲವು ಬಂಧುಗಳು ಹರಿದಾಸರಾಗಿದ್ದರೂ, ಅಂದು ಸುತ್ತಮುತ್ತಲೂ ಅನೇಕ ಹರಿದಾಸರು ಅಪರೋಕ್ಷ ಜ್ಞಾನಿಗಳೆನಿಸಿಕೊಂಡಿದ್ದರೂ, ಪಂಡಿತ ಆಚಾರ್ಯರಿಗೆ ಇದು ಸರಿ ಕಾಣಲಿಲ್ಲ. ಹರಿದಾಸರಲ್ಲಿ ಅವಜ್ಞೆಯೇ ಇದ್ದಿತು. 'ಪ್ರಾಕೃತ ಪದ ಪೇಳಿ ಕುಣಿವರೆ ಸರ್ವೋತ್ತಮ ಸಾರ್ವಭೌಮ ಶ್ರೀಶನೊಲಿಯುವನೆ' ಎಂಬ ವಾದ ಅವರದಾಗಿದ್ದಿತು. ಈ ವಿಚಾರವೂ ಅಂದಿನ ಸುಪ್ರಸಿದ್ಧ ಹರಿದಾಸರ ಕಿವಿಗಳಿಗೆ ಬೀಳುವುದು ತಡವಾಗಲಿಲ್ಲ.

ಒಮ್ಮೆ ವಿಜಯದಾಸರು ಚೀಕಲಪರಿವೆಯಿಂದ ಹತ್ತಿರವೇ ಇದ್ದ ಮಾನ್ವಿಗೆ ಪರಿವಾರ ಸಮೇತ ಬಂದು ಬಿಡಾರ ಮಾಡಿದರು. ಬ್ಯಾಗವಟ್ಟೆ ಶ್ರೀನಿವಾಸಚಾರ್ಯರಿಗೆ ಸ್ವತಃ ತಾವೇ ಹೋಗಿ ವಿಜಯದಾಸರು ಆರಾಧನೆಯ ಆಮಂತ್ರಣ ನೀಡಿದರು. ಒಳಗೆ ಹೇಗೇ ಇದ್ದರೂ ಹೊರಗೆ ದಾಕ್ಷಿಣ್ಯಕ್ಕಾಗಿ ಕಟುವಾಗಿ ಬಾರೆನೆಂದು ನುಡಿಯದಿದ್ದರೂ, ಒಳಗೆ ತಮ್ಮಂತಹವರು ಇವರಲ್ಲಿಗೆ ಊಟಕ್ಕೆ ಹೋಗಬಹುದೇ ಎಂಬ ಶಂಕೆ ಬಂದು ಹೋಗುವುದು ಉಚಿತವಲ್ಲ ಹೋಗಬಾರದು ಎಂಬ ನಿರ್ಧಾರಕ್ಕೆ ಬಂದರು. ಹೊರಗೆ ಹಾಗೆ ಹೇಳಲಿಲ್ಲವಾದರೂ ಅಂದು ಉದ್ದೇಶಪೂರ್ವಕವಾಗಿಯೇ ಪೂಜಾದಿಗಳನ್ನು ಬೇಗ ಬೇಗ ತೀರಿಸಿ ಭೋಜನವನ್ನು ಸ್ವೀಕರಿಸಿ ಬಿಟ್ಟರು.

ದಾಸ ಬಳಗದವರು ಊಟಕ್ಕೆ ಕರೆಯಲು ಬಂದರೆ ಹೊತ್ತಾಗಿ ಊಟ ಮಾಡಿದರೆ ಆಚಾರ್ಯರಿಗೆ ಹೊಟ್ಟೆಶೂಲೆ ಬರುವುದಾದ್ದರಿಂದ ಅವರ ಊಟ ಆಗಿದೆ ವಿಶ್ರಾಂತಿ ಪಡೆಯುತ್ತಿದ್ದಾರೆ ಎಂದು ತಿಳಿಸುವಂತೆ ಶಿಷ್ಯರಿಗೆ ಅಪ್ಪಣೆಯಾಗಿತ್ತು.

ಇತ್ತ ವಿಜಯದಾಸರು ತಮ್ಮ ಪೂಜಾದಿಗಳನ್ನು ಮುಗಿಸಿ ಊಟಕ್ಕೆ ಕುಳಿತುಕೊಳ್ಳುವ ಸಮಯ ಬಂದಾಗ ಆಚಾರ್ಯರಿಗೆ ಹೇಳಿ ಕಳಿಸಿದರು. ಸಿದ್ಧವಾದ ಉತ್ತರ ಬಂದಿತು. ಅದನ್ನು ಕೇಳಿದ ದಾಸರು 'ಹಾಗೇ ಆಗಲಿ' ಎಂದರು. ಆದರೆ ಒಳಗಿದ್ದ ವಿಜಯವಿಠಲನೂ 'ತಥಾಸ್ತು' ಎಂದನು. ಇದರಿಂದ 'ವಜನವ ನಿಜಕೆ ತಂದು ಕೊಡುವನು' ಎಂದು ವ್ಯಾಸವಿಠಲರು ಹಾಡುವಂತಾಯಿತು.

ಆಚಾರ್ಯರಿಗೆ ಮೂರನೆಯ ದಿನದಿಂದ ಊಟದ ಮೇಲೆ ಹೊಟ್ಟೆ ನೋವು ಕಾಣಿಸಿಕೊಳ್ಳಲಾರಂಭಿಸಿತು. ಕೆಲವು ದಿನಗಳಾದ ಮೇಲೆ ಊಟವಾಗಿದ್ದಾಗಲೂ ನೋವು ಕಾಣಿಕೊಂಡಿತು, ತೀವ್ರವಾಯಿತು. ಪಾಠಪ್ರವಚನಗಳು ನಿಂತು ಹೋದುವು. ಆಚಾರ್ಯರು ಕೃಶರಾದರು. ಔಷಧೋಪಚಾರಗಳಿಂದ ಏನೂ ಪ್ರಯೋಜನವಾಗಲಿಲ್ಲ.

ಹರಿ ಗುರುಗಳ ಸೇವೆಯ ಹಾದಿ ಹಿಡಿದರು. ಮಂತ್ರಾಲಯದಲ್ಲಿ ರಾಯರ ಬೃಂದಾವನ ಸೇವೆ ಮಾಡಿದಾಗ ಸೂಚನೆಯಾಯಿತು 'ಸರ್ವೋತ್ತಮರ ದ್ರೋಹವೇ' ವ್ಯಾಧಿಗೆ ಕಾರಣವಾದ್ದರಿಂದ ಅವರಲ್ಲೇ ಮೊರೆಹೋಗಬೇಕು ಎಂದು.

ಸಾತ್ವಿಕ ಚೇತನವಾದ್ದರಿಂದ ಉದಾಸೀನ ನಿರಾಕರಣೆ ನಿಂದೆಗಳನ್ನು ತ್ಯಜಿಸಿ ಕೂಡಲೇ ಚೀಕಲಪರಿವೆಯತ್ತ ಸವಾರಿ ಚಲಿಸಿತು. ವಿಜಯದಾಸರ ಪಾದದಲ್ಲಿ ಬಿದ್ದು ಕ್ಷಮಿಸಿ ಉದ್ಧರಿಸಬೇಕೆಂದು ಕೇಳಿಕೊಂಡರು. ವಿಜಯದಾಸರು ಕರುಣೆಯಿಂದಲೇ ಕಂಡರು, ಉಪಚರಿಸಿದರು, ನಲ್ನುಡಿಯನ್ನು ಆಡಿದರು. ಆದರೆ ರೋಗ ನಿವಾರಣೆ ಮಾತ್ರ ತಮ್ಮ ಶಿಷ್ಯ ಆಚಾರ್ಯರ ನೀತಗುರು ಶ್ರೀ ಭಾಗಣ್ಣನವರಿಂದಲೇ ಆಗಬೇಕು ಎಂದು ತಿಳಿಸಿದರು. ಆಗಲೂ ತಾಳ್ಮೆಗೆಡದೆ ಶ್ರೀನಿವಾಸಾಚಾರ್ಯರು ನರಳುತ್ತ ಉತ್ತನೂರಿನ ಕಡೆಗೆ ಹೊರಳಿದರು. ಆಚಾರ್ಯರ ಮೇಲೆ ತಮ್ಮ ಗುರುಗಳನ್ನು ಅವಮಾನಿಸಿದ ಕಾರಣದಿಂದ ಭಾಗಣ್ಣನವರಿಗೆ ಸಿಟ್ಟೇ ಬಂದಿತ್ತಾದರೂ, ಈಗ ಗುರುಗಳ ಅಪ್ಪಣೆಯಂತೆ ತಮ್ಮಲ್ಲಿಗೆ ಬಂದ ಶ್ರೀನಿವಾಸಾಚಾರ್ಯರನ್ನು ಆದರದಿಂದಲೇ ಕಂಡು, ಅವರ ಕಥೆಯನ್ನು ಅವರ ಬಾಯಿಂದಲೇ ಕೇಳಿ ಅನುತಾಪ ವ್ಯಕ್ತಪಡಿಸಿ, ಜೋಳದ ಭಕ್ರಿಯಲ್ಲಿ ಧನ್ವಂತ್ರಿ ದೇವರನ್ನು ಆಭಿಮಂತ್ರಿಸಿ ಅಮೃತ ಕುಂಭ ಹಿಡಿದ ಶ್ರೀಧವನನ್ನು ಪ್ರಾರ್ಥಿಸಿದರು. 'ಎನ್ನ ಬಿನ್ನಪ ಕೇಳ ಧನ್ವಂತ್ರಿ ದಯಮಾಡು ಸಣ್ಣವನು ಇವ ಕೇವಲ, ಎನ್ನ ಮಾತೆನ್ನದಿರು ಎನ್ನ ಹಿರಿಯರ ಮಾತು ಕರುಣಿಸು ದೊರೆ' ಎಂದು ಬೇಡಿದ ಭಾಗಣ್ಣನವರ ಪ್ರಾರ್ಥನೆಯನ್ನು ಮನ್ನಿಸಿದ ಗೋಪಾಲ ವಿಠಲನು ಆಚಾರ್ಯರ ವ್ಯಾಧಿಯನ್ನು ಕಳೆದನು. ಅನ್ನವನ್ನು ಎಷ್ಟೋ ದಿನಗಳಿಂದ ಬಿಟ್ಟಿದ್ದ ರೋಗಿ, ಗಟ್ಟಿಯಾದ ಜೋಳದ ರೊಟ್ಟಿಯನ್ನು ತಿಂದು ಅರಗಿಸಿ ಕೊಂಡಾಗ ಉದರ ಶೂಲೆಯೂ ಅದರೊಂದಿಗೇ ಕರಗಿ ಹೋಗಿ, ಹರಿದಾಸರ ಭಕ್ತಿ – ಶಕ್ತಿ ಜ್ಞಾನಗಳ ಅರಿವುಂಟಾಗಿ ಆಚಾರ್ಯರು ದೀನರಾಗಿ ಬೇಡಿದರು ತಮ್ಮ ಬಳಗಕ್ಕೆ ಸೇರಿಸಿಕೊಳ್ಳಿರಿ ಎಂದು !

ಫಂಡರಪುರಕ್ಕೆ ಹೋದರೆ ದೈವದತ್ತವಾಗಿಯೇ ಹರಿದಾಸ ದೀಕ್ಷೆ-ಅಂಕಿತ ದೊರೆಯುವುದೆಂದು ಜ್ಞಾನಿಗಳಾದ ಗೋಪಾಲದಾಸರು ಸೂಚಿಸಿದಾಗ, ಶ್ರೀನಿವಾಸಚಾರ್ಯರು ಕುತೂಹಲಾವಿಷ್ಟರಾಗಿ ಆದಷ್ಟು ಬೇಗ ಫಂಡರಪುರಕ್ಕೆ ಧಾವಿಸಿದರು. ಅಲ್ಲಿ ಚಂದ್ರಭಾಗಾ ನದಿಯಲ್ಲಿ ಸ್ನಾನಮಾಡಿದಾಗ ಆಚಾರ್ಯರ ತಲೆಯ ಮೇಲೊಂದು ಶ್ವೇತಶಿಲಾಫಲಕ ತಡವಿದಂತಾಗಿ ಅದನ್ನು ತೆಗೆದು ನೋಡಲಾಗಿ ಅದರಲ್ಲಿ ಸ್ಪಷ್ಟವಾಗಿ, "ಶ್ರೀಜಗನ್ನಾಥವಿಠಲ" ಎಂಬ ಮುತ್ತಿನಂತಹ ಅಕ್ಷರಗಳು ಕೆತ್ತಲಾಗಿದ್ದುದನ್ನು ಕಂಡು ಆಶ್ಚರ್ಯ ಸಂತೋಷಾಧಿಕ್ಯದಿಂದ ಸ್ಫೂರ್ತಿ ಚಿಮ್ಮಿ ಆಚಾರ್ಯರು ಹಾಡಿದರು.

ತಟತ್ಕೋಟಿನಿಭಕಾಯ ಜಗನ್ನಾಥ
ವಿಠಲಯ್ಯ ವಿಠಲಯ್ಯ ||ಪಲ್ಲವಿ||
ಭಜಿಸುವೆ ನಿನ್ನನು ಅಜಭವ ಸುರನುತ
ಭಜಕಾಮರತರು ಕುಜನ ಕುಠಾರೀ ||೧||
ನೀ ಕರುಣಿಸದೆ ನಿರಾಕರಿಸಲು ಎನ್ನ
ಸಾಕುವರಾರು ದಯಾಪರ ಮೂರುತಿ||೨||
ಶರಣಾಗತರನು ಪೊರೆವೆನೆಂಬ ತವ
ಬಿರುದು ಕಾಯೋ ಕರಿವರದ ಜಗನ್ನಾಥ
ವಿಠಲಯ್ಯ ||೩||

ಅನಂತರ ಫಂಡರೀರಾಯನನ್ನು ಕುರಿತು ಎರಡು ಕೃತಿಗಳು ಹೊರಹೊಮ್ಮಿದುವು. ಅನಂತರ ಅಂಕಿತ ಪ್ರಭಾವದಿಂದ ಗುರು ಪರಮಗುರುಗಳ ವಿಶೇಷ ಕೃಪೆಯಿಂದ

ನೂರಾರು ಕೃತಿಗಳು ಅವರಿಂದ ರಚಿತವಾದುವು.

ಈ ಅಂಕಿತದಿಂದ ಕೃತಿಗಳಿಂದ ಶ್ರೀನಿವಾಸಾಚಾರ್ಯ ಎಂಬ ಹೆಸರೇ ರೂಢಿತಪ್ಪಿ ಜಗನ್ನಾಥದಾಸರು ಎಂದೇ ಅವರು ಲೋಕದಲ್ಲಿ ಪ್ರಸಿದ್ಧರಾದರು. ಹರಿದಾಸ ವೃಂದದಲ್ಲಿ ಹೆಸರಾಂತ ಪ್ರಮುಖರಾದರು; ಕನ್ನಡ ಸಾಹಿತ್ಯಕ್ಕೆ ತಮ್ಮದೇ ಆದ ವಿಶಿಷ್ಟವಾದ ಕಾಣಿಕೆಯನ್ನು ಅರ್ಪಿಸಿದರು.

ಜಗನ್ನಾಥದಾಸರ ಜೀವನದಲ್ಲಿ ನಡೆದ ಮತ್ತೊಂದು ಪವಾಡ ಗಮನಾರ್ಹವಾದುದು. ಅವರು ಹರಿದಾಸರಾಗಲು ನಡೆದ ಪವಾಡದಂತೆಯೇ ಅವರ ಕೃತಿರಚನೆಗಳೂ ಕೂಡ ಒಂದು ಪವಾಡದ ಪರಿಣಾಮವೇ ಎನ್ನಬಹುದು.

ಕೃತಿರಚನೆಗೆ ಬೇಕಾದ ಪ್ರಾಸಾವ ವ್ಯುತ್ಪತ್ತಿ ಜ್ಞಾನ ಪ್ರತಿಭೆ ಇದ್ದರೂ ಮುಖ್ಯವಾಗಿ ಅಗತ್ಯವಾದ ಆಯುಸ್ಸೇ ಅವರಿಗೆ ಇರಲಿಲ್ಲ. 'ಸೋತ್ತುಮ ದ್ರೋಹದಿಂದ' ಅಡರಿದ ಆಪತ್ತು ಉದರಶೀಲೆ ಅಪಮೃತ್ಯುವನ್ನೇ ತರುವ ಹಾದಿಯನ್ನು ಹಿಡಿದಿತ್ತು. ದಿವ್ಯ ಜ್ಞಾನದೃಷ್ಟಿಯಿಂದ ಅದನ್ನು ತಿಳಿದ ವಿಜಯದಾಸರು ತಮ್ಮ ಪ್ರೀತಿಯ ಶಿಷ್ಯ ಭಾಗಣ್ಣನವರಿಗೆ ಅಪ್ಪಣೆ ಮಾಡಿ ಅವರ ಅರ್ಧ ಆಯುಮಾನವನ್ನೇ ಧಾರೆಯೆರೆಸಿದರು! ಭಾಗಣ್ಣನವರು ಗುರ್ವಾಜ್ಞೆಯನ್ನು ಶಿರಸಾವಹಿಸಿ ತಮ್ಮ ಅಮೂಲ್ಯ ಆಯುಸ್ಸಿನಲ್ಲಿ ಅರ್ಧ ಎಂದರೆ ನಲವತ್ತು ವರ್ಷಗಳನ್ನು ಶಿಷ್ಯರಿಗೆ ಧಾರೆಯೆರೆದರು! ತಮ್ಮ ಅಪಮೃತ್ಯುವನ್ನು ಕಳೆದರೆಂದು ಗೋಪಾಲದಾಸರನ್ನು ಕುರಿತು ಜಗನ್ನಾಥದಾಸರು ಹೇಳಿದ್ದಾರೆ! ಎರಡು ವಿಂಶತಿ ವರ್ಷಗಳನ್ನು ಗೋಪಾಲದಾಸರು ಶ್ರೀನಿವಾಸಾಚಾರ್ಯರಿಗೆ ಧಾರೆಯೆರೆದ ವಿಚಾರವನ್ನು ಭಾಗಣ್ಣನವರ ತಮ್ಮಂದಿರು 'ತಂದೆ ಗೋಪಾಲ ವಿಠಲ' ಮುದ್ರಿಕೆಯ ಕೃತಿಯಲ್ಲಿ ಕಾಣಬಹುದು.

ಭಜಿಸಿ ಬದುಕಿರೋ..............
...............................
ದಂಡ ನಮನವ ಮಾಡಿ ಕೇಳ್ದನು
ದ್ದಂಡ ಕ್ಷಯ ರೋಗ ಕಳಿತ್ವರಾ
ಹರುಷದಿಂದುತ್ತನೂರು ಸೇರಲು
ಪರಿಹಾರವಾಗುವುದೆಂದನು
ಬರಲು ಭಕ್ತಿಯು ಒಳಗೆ ನಾಲ್ವ
ತ್ತೊರುಷ ಆಯುವನಿತ್ತನು
ಸುಧಸುಪಾತ್ರದಿ ಹಿಡಿದ ಹರಿಯನು
ಮುದದಿ ಸ್ಮರಿಸುತ ಕೊಟ್ಟನು ||
—ತಂದೆ ಗೋಪಾಲವಿಠಲ

ಹೀಗೆ ದೊರೆತ ನಾಲ್ವತ್ತು ವರ್ಷ ಅಮೂಲ್ಯ ಆಯುಷ್ಯನ್ನು ಜಗನ್ನಾಥದಾಸರು ಅಮೂಲ್ಯ ಕೃತಿಗಳ ರಚನೆಗಾಗಿ ಸದುಪಯೋಗ ಪಡಿಸಿಕೊಂಡರು. ಆರುನೂರು ಸುವ್ವಾಲಿಗಳು, ಮುನ್ನೂರು ಕೀರ್ತನೆಗಳು, ಹರಿಕಥಾಮೃತಸಾರ, ಕೆಲವು ಸುಳಾದಿ-ಉಗಾಭೋಗ ಮತ್ತು ಬ್ರಹ್ಮಸೂತ್ರಗಳನ್ನು ಕನ್ನಡದಲ್ಲಿ ರಚಿಸಿದರೆಂದು ಪ್ರತೀತಿ. ಆದರೆ ಕಳೆದುಳಿದಿರುವುದು 408 ಸುವ್ವಾಲಿಗಳು, ಕೀರ್ತನೆ, ಸುಳಾದಿ-ಉಗಾ



ಭೋಗಗಳೆಲ್ಲವೂ ಸೇರಿ 202 ಕೃತಿಗಳು, ಮತ್ತು ಹರಿಕಥಾಮೃತಸಾರದ 988 ಷಟ್ಪದಿಗಳು ಮಾತ್ರ. ಉಳಿದುವು ಇನ್ನೂ ದೊರೆಯಬೇಕಾಗಿದೆ. ಶ್ರೀದವಿಠಲರು ಗುರುಗಳನ್ನು ಆಶುಕವಿಕುಲ ಕಲ್ಪತರುಎಂದು ಕರೆದಿದ್ದಾರೆ.

ಹರಿಕಥಾಮೃತಸಾರ ಒಂದು ಅಪೂರ್ವ ಗ್ರಂಥ, ಶಾಸ್ತ್ರ ಸಾಹಿತ್ಯಗ್ರಂಥ. ದ್ವೈತ ಸಿದ್ಧಾಂತಕ್ಕೆ ಸಂಬಂಧಿಸಿದ ಅನೇಕ ಪ್ರಮೇಯಗಳನ್ನು ಬಹು ಸಮರ್ಥ ರೀತಿಯಲ್ಲಿ ಇಲ್ಲಿ ಅಳವಡಿಸಲಾಗಿದೆ. ಗೇಯ ಗುಣದಿಂದ ಒಪ್ಪುವ ರಸವತ್ ಶೈಲಿಯಲ್ಲಿ ಈ ಕೃತಿ ರಚಿತವಾಗಿದೆ. ಶ್ರೀಹರಿಯ ಮಹಿಮೆಗಳು, ಅವತಾರಗಳು, ಅನನ್ಯ ಗುಣವಿಶೇಷಗಳು, ಅಪಾರ ಶಕ್ತಿಸಂಪನ್ನತೆ, ಅಘಟನಾಘಟನ ಸಾಮರ್ಥ್ಯ, ಅಚಿಂತ್ಯ ಅದ್ಭುತಶಕ್ತಿ, ಜೀವನಿಗೂ ಅವನಿಗೂ ಇರುವ ಸಂಬಂಧ-ವ್ಯತ್ಯಾಸ; ಮಾನವರ ಕರ್ತವ್ಯ, ಅನುಸಂಧಾನ ಕ್ರಮ, ಉಪಾಸನೆಯ ರೀತಿ, ಉಪಾಸನಾ ಲಕ್ಷಣ, ಜ್ಞಾನಿಯ-ಅಜ್ಞಾನಿಯ ಕುರುಹುಗಳು, ಭಕ್ತರಲ್ಲಿ ವೈವಿಧ್ಯ, ಜೀವರಲ್ಲಿ ವೈವಿಧ್ಯ, ತಾರತಮ್ಯ-ಪಂಚಭೇದ; ತತ್ತ್ವಾಭಿಮಾನಿಗಳು, ಅವರ ಕಾರ್ಯ ವಿಶೇಷ, ದೈತ್ಯರು ಅವರ ಕಾರ್ಯ, ಅವರಲ್ಲಿ ತಾರತಮ್ಯ, ಅವರ ನಾಯಕ, ಅವನ ಲಕ್ಷಣ-ಸ್ಥಳ, ಸಾಧನಫಲ; ಪಾಂಚಭೌತಿಕ ದೇಹ. ಅದು ಬರುವ ರೀತಿ, ಅದರೊಳಗಿರುವ ಇತರ ದೇಹಗಳು, ಅವುಗಳ ಬಿಡುಗಡೆ, ಮುಕ್ತಿಯ ಸ್ವರೂಪ, ಅದು ಯಾವಯಾವ ಜೀವರಿಗೆ ಹೇಗೆ ಹೇಗೆ ಯಾರಿಂದ ಯಾವಾಗ ಬರುತ್ತದೆ —ಹೀಗೆ ಪ್ರಮೇಯಾತ್ಮಕವಾದ ವಿಚಾರ ಪರಿಪ್ಲುತವಾದ ವಿದ್ವದ್ಗ್ರಂಥ ಹರಿಕಥಾಮೃತಸಾರ. ಸರಳವಾದ ಶೈಲಿಯಲ್ಲಿ ಸುಲಭವಾಗಿ ಹಾಡಲು ಬರುವ ಭಾಮಿನೀ ಷಟ್ಪದಿ ಛಂದಸ್ಸಿನಲ್ಲಿ ರಚಿತವಾದ ಈ ಗ್ರಂಥದ ಒಂದು ವೈಶಿಷ್ಟ್ಯವೆಂದರೆ ವಿಷಯ ವೈವಿಧ್ಯ. ಇದರ ಅನೇಕ ಭಾಗಗಳು ಶಾಸ್ತ್ರ ಜಟಿಲವಾಗಿದ್ದು, ಬಹು ಜನರಿಗೆ ಅರ್ಥವಾಗುವುದು ಕಷ್ಟವಾದ್ದರಿಂದ ವ್ಯಾಖ್ಯಾನ ಸಾಪೇಕ್ಷವಾಗಿ ಅನೇಕ ಜ್ಞಾನಿಗಳು ಇದಕ್ಕೆ ಸಂಸ್ಕೃತದಲ್ಲಿ ಕನ್ನಡದಲ್ಲಿ ಸುಲಭವಾಗಿ, ಕ್ಲಿಷ್ಟವಾಗಿ, ವಿದ್ವತ್ಪೂರ್ಣವಾಗಿ ಒಂಬತ್ತು ವಿವಿಧ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಮಂದಾಧಿಕಾರಿಗಳಿಗೆ ರಚಿತವಾದ ಗ್ರಂಥವಿದು— ಎನ್ನಲಾಗಿದ್ದರೂ ಅನೇಕ ಪಂಡಿತರಿಗೂ ಕಷ್ಟವಾದ ಭಾಗಗಳು ಇಲ್ಲುಂಟು. ಆದರೂ ಈ ಗ್ರಂಥ ತುಂಬ ಜನಪ್ರಿಯವಾಗಿದೆ. ಅನೇಕ ಇತರ ಭಾಷೆಗಳಿಗೂ ಈ ಗ್ರಂಥ ಅನುವಾದವಾಗಿದೆ. ಕರ್ಣಾಟಕದ ಹೊರಗೆ ಇರುವ, ಮನೆಯಲ್ಲಿ ಮಾತ್ರ ಕನ್ನಡ ಭಾಷೆಯನ್ನಾಡುವ ಕನ್ನಡಿಗರು ಕನ್ನಡ ಭಾಷೆಯನ್ನು ಓದಿ ಬರೆಯಲು ಬಾರದವರು, ಅವರವರ ಭಾಷಾಲಿಪಿಗಳಲ್ಲಿ ಬರೆದುಕೊಂಡು ಓದಿಕೊಳ್ಳುವ ಪರಿಪಾಠವೂ ಇದೆ– ತೆಲುಗು ಮರಾಠಿ, ತಮಿಳು, ಸಂಸ್ಕೃತ ಲಿಪಿಗಳಲ್ಲಿ ಹರಿಕಥಾಮೃತಸಾರವಿದೆ.

(25 ನೇ ಪುಟ ನೋಡಿ)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

# ದೇಶಿಕರ ದ್ರಾವಿಡ ಗ್ರಂಥಗಳು ಹಾಗೂ ಸಂದೇಶ

ಸಾರ್ವಜನಿಕ ಉದ್ಧಾರದಲ್ಲಿ ನಿಷ್ಠರಾದ ವೇದಾಂತದೇಶಿಕರವರು ಸಂಸ್ಕೃತ ಭಾಷಾ ಪರಿಚಯವಿಲ್ಲದ ಸಾಮಾನ್ಯರಿಗೂ ಸಹ ಸಿದ್ಧಾಂತದ ತಿಳುವಳಿಕೆಯನ್ನುಂಟುಮಾಡಿ ಅವರ ಜೀವನವು ಸುಗಮವೂ ಸಾರ್ಥಕವೂ ಆಗುವುದಕ್ಕಾಗಿ ತಮಿಳು ಮತ್ತು ಮಣಿ ಪ್ರವಾಳಭಾಷೆಯಲ್ಲಿ ಅನೇಕ ರಹಸ್ಯಪ್ರತಿಪಾದಕ ಗ್ರಂಥಗಳನ್ನು ರಚಿಸಿದ್ದಾರೆ. ಈ ರಹಸ್ಯಗಳನ್ನು ಸುಲಭವಾಗಿ ಜ್ಞಾಪಕದಲ್ಲಿಟ್ಟುಕೊಳ್ಳಲು ಅನುಕೂಲಿಸುವಂತೆ ರಹಸ್ಯವನ್ನೆಲ್ಲಾ ಸಂಗ್ರಹಿಸಿ ಹಾಡುವುದಕ್ಕೆ ಹೊಂದಿಕೊಳ್ಳುವಂತೆ ದ್ರಾವಿಡಭಾಷಾತ್ಮಕವಾದ ಪ್ರಬಂಧಗಳನ್ನು ರಚಿಸಿದ್ದಾರೆ. ಹೀಗೆ ರಚಿತವಾದುವುಗಳಲ್ಲಿ ಅನುಷ್ಠಾನಾದಿ ಶಾಸ್ತ್ರ ಪ್ರತಿಪಾದಕ ಗ್ರಂಥಗಳು ೩೨, ಪ್ರಬಂಧಗಳು ೨೪ ಪ್ರಸಿದ್ಧವಾಗಿವೆ.

ಇವುಗಳಲ್ಲಿ ಪ್ರಧಾನವಾದುದು 'ರಹಸ್ಯತ್ರಯಸಾರ'ವೆಂಬ ವಿಸ್ತಾರವಾದ ಗ್ರಂಥ. ಇದರಲ್ಲಿ ವೈಷ್ಣವ ಸಂಪ್ರದಾಯಸಿದ್ಧವಾದ ವಿಶಿಷ್ಟಾದ್ವೈತ ಪ್ರತಿಸಿದ್ಧಾಂತಭೂತವಾದ ಅನೇಕ ವಿಷಯಗಳು ಪ್ರತಿಪಾದ್ಯವಾಗಿವೆ. ಮೂಲಮಂತ್ರ, ದ್ವಯ ಮತ್ತು ಚರಮ ಶ್ಲೋಕವೆಂದು ಪ್ರಸಿದ್ಧವಾಗಿರುವ ಮಂತ್ರಗಳ ರಹಸ್ಯವು ವಿವರಣ ರೂಪದಿಂದ ಇಲ್ಲಿ ಪ್ರತಿಪಾದಿತವಾಗಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಇದರಲ್ಲಿ ಮೂವತ್ತೆರಡು ರಹಸ್ಯಗಳು ನಾಲ್ಕು ಭಾಗಗಳಲ್ಲಿ ಉಕ್ತವಾಗಿವೆ. ಉಪೋದ್ಘಾತಾಧಿಕಾರ, ಸಾರನಿಷ್ಕರ್ಷಾಧಿಕಾರ, ಪ್ರಧಾನಪ್ರತಿತಂತ್ರಾಧಿಕಾರ, ಅರ್ಥ ಪಂಚಕಾಧಿಕಾರ, ತತ್ತ್ವತ್ರಯಚಿಂತನಾಧಿಕಾರ, ಪರದೇವತಾಪಾರಮ್ಯಾರ್ಥಾಧಿಕಾರ, ಮುಮುಕ್ಷುತ್ವಾಧಿಕಾರ, ಸ್ವನಿಷ್ಠಾಭಿಜ್ಞಾನಾಧಿಕಾರ, ಉತ್ತರಕೃತ್ಯಾಧಿಕಾರ, ಪುರುಷಾರ್ಥಕಾಷ್ಠಾಧಿಕಾರ, ಶಾಸ್ತ್ರೀಯ ನಿಯಮನಾಧಿಕಾರ, ಅಪರಾಧ ಪರಿಹಾರಾಧಿಕಾರ, ಸ್ಥಾನವಿಶೇಷಾಧಿಕಾರ, ನಿರ್ಯಾಣಾಧಿಕಾರ, ಗತಿವಿಶೇಷಾಧಿಕಾರ, ಪರಿಪೂರ್ಣ ಬ್ರಹ್ಮಾನುಭವಾಧಿಕಾರ, ಇವು ಮೊದಲನೆಯ ಭಾಗವು. ಸಿದ್ಧ್ಯುಪಾಯ ಶೋಧನಾಧಿಕಾರ, ಸಾಧ್ಯೋಪಾಯ ಶೋಧನಾಧಿಕಾರ, ಪ್ರಭಾವ ವ್ಯವಸ್ಥಾಧಿಕಾರ, ಪ್ರಭಾವ ರಕ್ಷಾಧಿಕಾರ, ಇವು ಎರಡನೆಯ ಭಾಗದವು. ಮೂಲಮಂತ್ರಾಧಿಕಾರ, ದ್ವಯಾಧಿಕಾರ, ಚರಮಶ್ಲೋಕಾಧಿಕಾರ ಇವು ಮೂರನೆಯ ಭಾಗದವು. ಆಚಾರ್ಯ ಕೃತ್ಯಾಧಿಕಾರ, ಶಿಷ್ಯಕೃತ್ಯಾಧಿಕಾರ, ನಿಗಮನಾಧಿಕಾರ ಇವು ನಾಲ್ಕನೆಯ ಭಾಗಕ್ಕೆ ಸೇರಿದುವು. ಇದು ವೈಷ್ಣವ ಸಂಪ್ರದಾಯಸ್ಥರಿಂದ ಪರಮ ಪೂಜ್ಯಗ್ರಂಥವೆಂದು ಪರಿಗಣಿತವಾಗಿದೆ.

ಪರಮಪದ ಸೋಪಾನಮ್: ಇಲ್ಲಿ ಬ್ರಹ್ಮವಿದರಾದವರು ಪರಮಪದವನ್ನು ಅಡರುವ ಕ್ರಮವು ಉಕ್ತವಾಗಿದೆ. ಇದರಲ್ಲಿ ವಿವೇಕಪರ್ವ, ನಿರ್ವೇದಪರ್ವ, ವಿರಕ್ತಿಪರ್ವ ಭೀತಿಪರ್ವ, ಪ್ರಸಾದ ಹೇತುಪರ್ವ, ಅರ್ಚಿರಾದಿ ಮಾರ್ಗಪರ್ವ, ದಿವ್ಯದೇಶ ಪ್ರಾಪ್ತಿ ಪರ್ವ, ಮೋಕ್ಷಾನುಭವಪರ್ವ ಎಂಬ ಒಂಬತ್ತು ಪರ್ವಗಳಿವೆ.

ಹಸ್ತಿಗಿರಿ ಮಾಹಾತ್ಮ್ಯಮ್ :–ಬ್ರಹ್ಮಾಂಡ ಪುರಾಣೋಕ್ತ ಕ್ರಮದಿಂದ ಸತ್ಯವ್ರತ ಕ್ಷೇತ್ರವೆಂಬ ಪರ್ಯಾಯ ನಾಮದಿಂದ ಕರೆಯಲ್ಪಡುವ ಕಾಂಚೀಪುರದಲ್ಲಿರುವ ಹಸ್ತಿಗಿರಿಯ ಮಾಹಾತ್ಮ್ಯವನ್ನು ತಿಳಿಸುವ ಗ್ರಂಥವಿದು. ಇದರಲ್ಲಿ ಬ್ರಹ್ಮನ ಅಶ್ವಮೇಧಕರಣ, ವರದ ರಾಜನ ಆವಿರ್ಭಾವ ಮುಂತಾದುವು ವರ್ಣಿತವಾಗಿವೆ.

ಆಚಾರ್ಯರು ಲಘು ರಹಸ್ಯಗಳೆಂಬ ಹೆಸರಿನಲ್ಲಿ ೨೮ ಗ್ರಂಥಗಳನ್ನು ಅನುಗ್ರಹಿಸಿದ್ದಾರೆ. ಅವುಗಳು ಅಮೃತರಂಜನಿ ಮತ್ತು ಅಮೃತಾಸ್ವಾದಿನಿ ಎಂಬ ಎರಡು ವಿಭಾಗಗಳಲ್ಲಿ ವ್ಯವಹರಿಸಲ್ಪಟ್ಟಿವೆ. ಸಂಪ್ರದಾಯ ಪರಿಶುದ್ಧಿ, ತತ್ತ್ವಪದವಿ, ರಹಸ್ಯಪದವಿ, ತತ್ತ್ವ ನವನೀತಂ, ತತ್ತ್ವಮಾತೃಕಾ, ರಹಸ್ಯ ಮಾತೃಕಾ ತತ್ತ್ವಸಂದೇಶಂ, ರಹಸ್ಯ ಸಂದೇಶ ವಿವರಣಮ್, ತತ್ತ್ವ ರತ್ನಾವಳಿ, ತತ್ತ್ವ ರತ್ನಾವಳಿ ವಿಷಯಸಂಗ್ರಹಂ, ರಹಸ್ಯ ರತ್ನಾವಳಿ ಹೃದಯಂ, ತತ್ತ್ವತ್ರಯ ಚುಳಕಂ, ರಹಸ್ಯತ್ರಯ ಚುಳಕಂ, ಸಾರ ದೀಪ್ತಂ. ಈ ೧೭ ಮೊದಲನೆಯ ಭಾಗದವು, ಸಾರಸಾರಂ, ಅಭಯ ಪ್ರದಾನಸಾರಂ, ತತ್ತ್ವ ಶಿಖಾಮಣಿ, [ಲುಪ್ತ] ರಹಸ್ಯ ಶಿಖಾಮಣಿ, ಅಂಜಲಿ ವೈಭವಂ, ಪ್ರಧಾನ ಶತಕಂ, ಉಪಕಾರಸಂಗ್ರಹ, ಸಾರಸಂಗ್ರಹಂ, ಮಧುರಕವಿ ಹೃದಯಂ, ಮುನಿ ವಾಹನ ಭೋಗಂ, ವಿರೋಧಿ ಪರಿಹಾರಂ, ಇವು ಹನ್ನೊಂದೂ ದ್ವಿತೀಯ ಭಾಗದವು, ಇವು ಮಣಿಪ್ರವಾಳ ಶೈಲಿಯಲ್ಲಿವೆ.

ಪರಮತ ಭಂಗಂ:– ಇದರಲ್ಲಿ ೫೪ ಪಾಶುರಗಳಿವೆ, ಜೀವತತ್ತ್ವ ಅಚಿತ್ತತ್ತ್ವ, ಪರತತ್ತ್ವ ಇತ್ಯಾದಿಗಳನ್ನು ವಿವರಿಸಿ ಚಾರ್ವಾಕ, ಮಾಧ್ಯಮಿಕ, ಯೋಗಾಚಾರ, ಸೌತ್ರಾಂತಿಕ, ವೈಶೇಷಿಕ, ಅದ್ವೈತ, ಜೈನ, ಭಾಸ್ಕರ, ವೈಯಾಕರಣ, ವೈಭಾಷಿಕ, ಗೌತಮ, ಮೀಮಾಂಸ, ಸಾಂಖ್ಯ, ಯೋಗ ಪಾಶುಪತ–ಇತ್ಯಾದಿ ಮತಗಳ ಗುಣದೋಷಗಳನ್ನು ಪ್ರಮಾಣಗಳಿಂದ ವಿಮರ್ಶೆಮಾಡಿ ವಿಶಿಷ್ಟಾದ್ವೈತಮತ ಸಿದ್ಧಾಂತದ ಸಾರಾಂಶವನ್ನು, ಮೇಲ್ಮೆಯನ್ನು ಸಂಗ್ರಹಿಸಲಾಗಿದೆ. ಇತರ ಮತಗಳಲ್ಲಿರುವ ಅಸಾರವನ್ನೇ ಹಲವರು ಒಪ್ಪಿ, ಅದರಂತೆ ನಡೆದು ಕೊನೆಗೆ ಅದರಲ್ಲಿ ಅರುಚಿ ಹುಟ್ಟಿ ಸಾರತಮವಾದ ಅಮೃತರಸ ಭರಿತವಾದ ಮತಕ್ಕೆ ಕಾಲಾಂತರದಲ್ಲಿ ಹಿಂದಿರುಗುವರು ಎಂದು ಇಲ್ಲಿ ಸೂಚಿತವಾಗಿದೆ.

ಡಾ|| ಎನ್. ಅನಂತರಂಗಾಚಾರ್

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಗುರು ಪರಂಪರಾಸಾರಂ:- ಇದರಲ್ಲಿ ವೈಷ್ಣವರ ಪರಂಪರಾಕ್ರಮ, ಪ್ರತಿದಿನ ತದನುಸಂಧಾನಾವಶ್ಯಕತೆ, ಗುರುವರ್ಯರಿಂದ ರಚಿತವಾದ ಗ್ರಂಥಗಳ ಹೆಸರು ಮೊದಲಾದುವು ಸಂಗ್ರಹವಾಗಿ ನಿರೂಪಿತವಾಗಿದೆ. ಈ ಗ್ರಂಥವು ಪ್ರಾಯೇಣ 'ರಹಸ್ಯತ್ರಯಸಾರ' ಸಹಾನುಬಂಧಿಯೇ ಆಗಿದ್ದರೂ ಅದರಿಂದ ಭಿನ್ನವಾದುದು.

ದೇಶಿಕ ಪ್ರಬಂಧಂ:- ಇವು ದ್ರಾವಿಡ ಗಾಥಾರೂಪವಾದ ೧೮ ಗ್ರಂಥಗಳು. ಇವುಗಳಲ್ಲಿ ಮುಮ್ಮಣಿಕ್ಕೋವೈ (ಮಣಿತ್ರಯ ಮಾಲಾ) ಪಂದುಪ್ಪಾ (ಕಂದುಕಗಾಥಾ) ಕಳಿಪ್ಪಾ, ಅಮ್ಮವೈಪ್ಪಾ, ಊಶಲ್ಪಾ, ಏಶಲ್‌ಪಾ, ನವರತ್ನಮಾಲೈ – ಇವು ಉಪಲಬ್ಧವಿಲ್ಲ. ಇವುಗಳ ಅಸ್ತಿತ್ವವು ಮಹಾಚಾರ್ಯರಿಂದ ಉಕ್ತವಾಗಿದೆ.

ಅಡೈಕ್ಕಲಪತ್ತು:- ಪ್ರಪತ್ತಿ ವಿಷಯಕ ಭಕ್ತಿಗಾಥೆ ೧೧ ಪಾಶರಗಳನ್ನುಳ್ಳದ್ದು. ಬಹು ಭಕ್ತಿಮಯವಾಗಿದೆ.

ಅರ್ಥಪಂಚಕಂ:- ಇದು ವೈಷ್ಣವರ ಬಹುಪ್ರಿಯವಾದ ಕೈಪಿಡಿ. ಇದರಲ್ಲಿ ಪರಬ್ರಹ್ಮಸ್ವರೂಪ, ಮೋಕ್ಷಸಾಧನ, ಫಲ ಮತ್ತು ಧ್ಯೇಯ, ಸಾಧನೆಗಿರುವ ಅಡಚಣೆಗಳು – ಇವು ವಿಶದೀಕೃತವಾಗಿವೆ.

ಪ್ರಾಪ್ಯಸ್ಯ ಬ್ರಹ್ಮಣೋ ರೂಪಂ
ಪ್ರಾಪ್ತುಶ್ಚ ಪ್ರತ್ಯಗಾತ್ಮನಃ
ಪ್ರಾಪ್ತ್ಯುಪಾಯಂ ಫಲಂಚೈವ
ತಥಾಪ್ರಾಪ್ತಿ ವಿರೋಧಿ ಚ
ವದಂತಿ ಸಕಲಾವೇದಾಃ
ಸೇತಿಹಾಸ ಪುರಾಣಕಾ

ಎಂಬ ಶ್ಲೋಕದ ವಿವರಣೆ ೧೧ ಪಾಶರಗಳಲ್ಲಿ ಅಡಕವಾಗಿದೆ.

ಶ್ರೀವೈಷ್ಣವ ದಿನಚರಿ:- ಪಾಂಚರಾತ್ರ ಸಂಹಿತಾನುಗುಣವಾದ ನಿತ್ಯಾಹ್ನಿಕ ಕ್ರಮಗಳನ್ನು ವಿವರಿಸುತ್ತದೆ. ಹತ್ತು ಪಾಶರಗಳನ್ನುಳ್ಳದ್ದು.

ಪನ್ನಿರು ನಾಮಂ:- ಪುಂಡ್ರಧಾರಣದ ಆವಶ್ಯಕತೆ, ಸ್ಥಾನಗಳು, ಆಕಾರಗಳು, ಫಲ ಮುಂತಾದುವನ್ನು ವಿಶೇಷ ವಿಮರ್ಶೆಯಿಂದ ವಿವರಿಸಿದೆ.

ತಿರುಚಿನ್ನಮಾಲೈ:- ಕಂಚಿಯ ವರದರಾಜರ ಬ್ರಹ್ಮೋತ್ಸವವನ್ನು ಕೊಂಡಾಡುವ ಚಿನ್ನಗಹಳೆಯ ವಿವರಣೆ. ಇದರಲ್ಲಿ ರಹಸ್ಯಾರ್ಥದ ವಿವರಣೆಗಳೆಲ್ಲ ಪ್ರಕಾರಾಂತರದಿಂದ ಸೂಚಿತವಾಗಿವೆ.

ಗೀತಾರ್ಥ ಸಂಗ್ರಹ ಗಾಥಾ:- ಇದು ಯಾಮುನಾಚಾರ್ಯರ 'ಗೀತಾರ್ಥ ಸಂಗ್ರಹ'ದ ತಮಿಳು ರೂಪ. ವೇದಾಂತ ದೇಶಿಕರವರೇ ಸಂಸ್ಕೃತದಲ್ಲಿ 'ಗೀತಾರ್ಥ ಸಂಗ್ರಹ ರಕ್ಷಾ' ಎಂಬ ಗ್ರಂಥವನ್ನು ರಚಿಸಿದ್ದಾರೆ. ಇದು ಅದರಂತೆಯೇ ಇರುವ ತಮಿಳು ಭಾಷೆಯ ಗ್ರಂಥ.

ಆಹಾರ ನಿಯಮಂ:- ಶಾಸ್ತ್ರ ವಿದಿತ ಕರ್ಮಗಳನ್ನು, ಆಚಾರಗಳನ್ನೂ, ಪಾಲಿಸಲು ಆಹಾರಶುದ್ಧಿ ಅತ್ಯಾವಶ್ಯಕ. ಅದು ಶುದ್ಧವಿಲ್ಲದಿದ್ದರೆ–ವ್ಯತ್ಯಾಸವಾದರೆ ಅಕೃತ್ಯಕರಣವೂ, ಕೃತ್ಯಾಕರಣವೂ ಸಂಭವಿಸುತ್ತವೆ. ಅವನ್ನು ತಡೆಯಲು ಶ್ರುತಿಗಳು ಸೂಕ್ತ ಮಾರ್ಗವನ್ನು ಸೂಚಿಸಿವೆ. 'ಆಹಾರ ಶುದ್ಧಿ ಸತ್ವಶುದ್ಧಿಃ ಸತ್ವ ಶುದ್ಧೌ ಧ್ರುವಾ ಸ್ಮೃತಿಃ' ಎಂಬುದೇ ಆ ಸೂಚನೆ. ಶಾಸ್ತ್ರ ನಿಷಿದ್ಧವಾದ ಆಹಾರವನ್ನು ಸೇವಿಸುವುದರಿಂದ ಅಜ್ಞಾನವೂ ಸಾತ್ವಿಕಾಹಾರದಿಂದ ಭಗವದ್ಭಕ್ತಿಯೂ ಹೆಚ್ಚುವುದೆಂಬುದು ಶಿಷ್ಟಾಭಿಮತ. ಈ ವಿಷಯವನ್ನು ದೇಶಿಕರು ತಮಿಳಿನ ೨೧ ಪಾಶರಗಳಲ್ಲಿ ಸ್ಪಷ್ಟೀಕರಿಸಿದ್ದಾರೆ.

ತಿರುಮಂತ್ರ, ದ್ವಯ ಮತ್ತು ಚರಮ ಶ್ಲೋಕಗಳು, ಆ ಮಂತ್ರಗಳಲ್ಲಿ ಅಡಕವಾಗಿರುವ ಪ್ರಪತ್ತಿ ಸ್ವರೂಪವನ್ನು ವಿಶದಪಡಿಸುತ್ತವೆ.

ಪ್ರಬಂಧಸಾರವು:- ಆಳ್ವಾರುಗಳ ಅವತಾರಸ್ಥಳ, ನಕ್ಷತ್ರ, ತಿಥಿ, ಮಾಸಗಳು, ರಚಿಸಿದ ಗ್ರಂಥಗಳು – ಅವುಗಳ ವಿಸ್ತಾರ ಮೊದಲಾದುವನ್ನು ತಿಳಿಸುವ ೧೮ ಪಾಶರಗಳು. 'ನಿಗಮಪರಿಮಳಂ' ಎಂಬ ಬಹು

ವಿಸ್ತಾರವಾದ ಗ್ರಂಥ ಈಗ ಉಪಲಬ್ಧವಿಲ್ಲ. ಶ್ರೀ ಶಠಗೋಪರ ದಿವ್ಯಸೂಕ್ತಿಗಳ ವಿಸ್ತೃತ ವ್ಯಾಖ್ಯಾನರೂಪವಾದ ಈ ಗ್ರಂಥ ೭೪೦೦೦ ಗ್ರಂಥ ಪರಿಮಿತಿಯುಳ್ಳದ್ದೆಂದು ಪೂರ್ವಾಚಾರ್ಯರ ಅಭಿಪ್ರಾಯ.

ಇವುಗಳೇ ಅಲ್ಲದೆ 'ಶಿಲ್ಪಸಾರ', 'ಗುರು ರತ್ನಾವಳಿ' 'ಯಮಕ ರಹಸ್ಯಮ್' 'ಸ್ತ್ರೇಯಾವಿರೋಧ', 'ಯಮಕರತ್ನಾಕರ' ಎಂಬ ಗ್ರಂಥಗಳನ್ನು ಆಚಾರ್ಯರು ರಚಿಸಿರುವಂತೆ ಗ್ರಂಥಾಂತರಗಳಿಂದ ತಿಳಿದು ಬರುತ್ತದೆ. ಇವು ಯಾವವೂ ಉಪಲಬ್ಧವಿಲ್ಲ.

ನಿಗಮನ:— ವೇದಾಂತದೇಶಿಕರ ಸರ್ವತೋಮುಖವಾದ ಗ್ರಂಥಗಳ ಪರಿಚಯದಿಂದ ಅವರ ನಿಸರ್ಗ ಸಿದ್ಧವಾದ ಪ್ರತಿಭೆ, ನಿಷ್ಕೃಷ್ಟವಾದ ಜ್ಞಾನ, ಗಹನವಾದ ವಿಷಯಗಳನ್ನು ಸರಳ ರೀತಿಯಲ್ಲಿ ಬೋಧಿಸುವ ವಾಕ್ಯವಿನ್ಯಾಸ ಕೌಶಲ, ಪೂರ್ವಾಚಾರ್ಯರ ಗ್ರಂಥಗಳಲ್ಲಿ ಮೇಲೆ ಕಾಣಬಹುದಾದ ವಿರೋಧಾಭಾಸಗಳನ್ನು ಕ್ರಮಬದ್ಧವಾಗಿ ಸಮನ್ವಯ ಮಾಡುವ ಅಪೂರ್ವ ಜಾಣ್ಮೆ ಮೊದಲಾದುವು ಎದ್ದು ಕಾಣುವುವು.

ಅವರು ಜ್ಞಾನ ಭಕ್ತಿ ವೈರಾಗ್ಯಗಳ ತ್ರಿವೇಣೀ ಸಂಗಮವಾಗಿದ್ದರು. ವಿನಯ ತಾಳ್ಮೆಗಳು ಅವರಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದ್ದವು. 'ಅಹಂತೇ ನಾಹಂ ತೇ ವಿಹರಣ ಪದಂ' ಎಂದರವರು. ಸಕಲ ವಿದ್ಯಾ ವಿಶಾರದರಾಗಿ, ಸಕಲ ಕಲಾನಿಪುಣರಾಗಿ ಸಂಚರಿಸುವ ವಿಶ್ವಕೋಶವಾಗಿದ್ದರು. ಅವರ ಸಾಹಿತ್ಯ ಪ್ರಸಂಚ ಅತಿ ವಿಸ್ತಾರವಾಗಿದ್ದಿತು. ಅವರು ಅನೋದಿಸಿದ ಗ್ರಂಥರಾಶಿ, ಅವರು ರಚಿಸಿದ ಗ್ರಂಥಪ್ರಮಾಣ, ಅವರ ವಿಷಯವಾಗಿ ತಿಳಿದು ಬಂದಿರುವ ಸಾಹಿತ್ಯ ಸಮೃದ್ಧಿ ಇವು ಎಂತಹವರನ್ನೂ ದಂಗು ಬಡಿಸುತ್ತವೆ. ಆ ಗ್ರಂಥ ಸಮುದಾಯವನ್ನು ಒಂದು ಕಡೆ ಕೂಡಿಡುವುದೂ ಕಷ್ಟಸಾಧ್ಯ. ಅವರು ಅನುವಾದಮಾಡಿರುವ ಗ್ರಂಥಗಳಲ್ಲಿ ಈಗ ಅನೇಕ ಅನುಪಲಬ್ಧ. ಅವರು ವೇದಾಂತಿಗಳಲ್ಲಿ ಪರಮ ವೇದಾಂತಿಗಳೂ, ದಾರ್ಶನಿಕರಲ್ಲಿ ಪರಮ ದಾರ್ಶನಿಕರೂ, ತಾರ್ಕಿಕರಲ್ಲಿ ಅಸಾಮಾನ್ಯ ತಾರ್ಕಿಕರೂ, ಕವಿಗಳಲ್ಲಿ ಕವಿಶ್ರೇಷ್ಠರೂ, ಜ್ಞಾನಿಗಳಲ್ಲಿ ಮಹಾಜ್ಞಾನಿಗಳೂ ಕರ್ಮಠರಲ್ಲಿ, ವೀರಕರ್ಮಠರೂ, ವಿರಕ್ತರಲ್ಲಿ ಪರಮ ವಿರಕ್ತರೂ, ಭಕ್ತರಲ್ಲಿ ಉತ್ತಮ ವರ್ಗದ ಭಕ್ತಾಗ್ರೇಸರರೂ, ಲೇಖಕರಲ್ಲಿ ಪ್ರಥಮವರ್ಗದ ಲೇಖಕರೂ, ವಿನೀತರಲ್ಲಿ ಪರಮ ಉಪಶಾಂತರೂ, ಆಚಾರ್ಯರಲ್ಲಿ ಆದರ್ಶ ಆಚಾರ್ಯವರ್ಯರೂ ಆಗಿದ್ದರು. ತಮ್ಮ 'ನ್ಯಾಸವಿಂಶತಿ'ಯ ಮುಂದಿನ ಶ್ಲೋಕದಲ್ಲಿ ನಿರೂಪಿಸಿರುವ ಸದಾಚಾರ್ಯರ ಲಕ್ಷಣಗಳಿಗೆ ಅವರೇ ಪ್ರಥಮ ಲಕ್ಷ್ಯವಾಗಿದ್ದರು.

ಸಿದ್ಧಂ ಸತ್ಸಂಪ್ರದಾಯೇ ಸ್ಥಿರಧಿಯ
ಮನಘಂ ಶ್ರೋತ್ರಿಯಂ ಬ್ರಹ್ಮನಿಷ್ಠಂ
ಸತ್ವಸ್ಥಂ ಸತ್ಯವಾಚಂ ಸಮಯ
ನಿಯತಯಾ ಸಾಧುವೃತ್ತ್ಯಾಸಮೇತಂ ।
ದಂಭಾಸೂಯಾದಿಮುಕ್ತಂ ಜಿತವಿಷಯ
ಗಣಂ ದೀರ್ಘಬಂಧುಂ ದಯಾಳುಂ
ಸ್ಖಾಲಿತ್ಯೇ ಶಾಸಿತಾರಂ ಸ್ವಪರಹಿತಪರಂ
ದೇಶಿಕಂ ಭೂಷ್ಣುರೀಪ್ಸೇತ್

ದೇಶಿಕರ ಗ್ರಂಥಗಳಿಂದ, ಅವರ ಶ್ರೀಸೂಕ್ತಿಗಳಿಂದ ಅವರ ನಿಷ್ಠೆಯೂ ಉಪದೇಶವೂ ಗೊತ್ತಾಗುತ್ತದೆ. ಮೇಲೆಯೇ ತಿಳಿಸಿರುವಂತೆ ಅವರ ನಿರ್ಮಲ ಜೀವನವೇ ಒಂದು ಅಮರ ಸಂದೇಶವಾಗಿದೆ. 'ಅನಂತಂ ಬತ ಮೇ ವಿತ್ತಂ ಯಸ್ಯಮೇನಾಸ್ತಿ ಕಿಂಚನ' ಎಂದು ಜನಕಮಹಾರಾಜನು ಹೇಳಿದಂತೆ ಅವರ ಆಧ್ಯಾತ್ಮಿಕ ಸಂಪತ್ತು ಲೌಕಿಕ ಸಂಪತ್ತುಗಳೆಲ್ಲಕ್ಕಿಂತ ಅಮಿತವಾಗಿ ಅನಂತವಾಗಿದೆ. ಲೋಕದಲ್ಲಿ ಬಾಳುವ ಜನ ಯಾವ ಸಂಪತ್ತನ್ನು ಪಡೆಯಲು ಹಂಬಲಿಸಬೇಕೆಂಬುದನ್ನು ಇದು ಉಜ್ವಲವಾಗಿ ತೋರಿಸಿಕೊಡುತ್ತದೆ.

ಈ ಲೋಕದ ವ್ಯವಹಾರವೆಲ್ಲವೂ ಭಗವದಧೀನವಾಗಿದ್ದರೂ ಅನೇಕವೇಳೆ ನಾವೇ ಸ್ವತಂತ್ರರೆಂಬಂತೆ ವರ್ತಿಸುತ್ತೇವೆ. 'ಕೋಽನ್ಯೋಽಪಿ ಸದೃಶೋ ಮಮಾ' ಎಂಬಂತಹ ಆಸುರಭಾವ ನಮ್ಮನ್ನಾವರಿಸಿದೆ. ಇದನ್ನು ಕತ್ತರಿಸಿ ಹಾಕಬೇಕೆಂಬುದು ಆಚಾರ್ಯರ ಉಪದೇಶ. ದೇಹಾತ್ಮಭ್ರಮೆಯೂ ಸ್ವತಂತ್ರಾತ್ಮಭ್ರಮೆಯೂ ಕಡಿದು ಹೋಗಬೇಕಾದರೆ ಚೇತನ, ಅಚೇತನ, ಮತ್ತು ಈಶ್ವರ ಎಂಬ ತತ್ತ್ವತ್ರಯ ಲಕ್ಷಣ ಸ್ವರೂಪ ಮತ್ತು ವಿಭಾಗಗಳ ಯಥಾರ್ಥ ಜ್ಞಾನ ಆವಶ್ಯಕ, ಅದಕ್ಕಾಗಿ ಅದರ ನಿರಂತರಾನುಸಂಧಾನ ಆಗಬೇಕು. ಇದರ ನಿರೂಪಣೆಯೇ ಆಗಿರುವ ಅರ್ಥಪಂಚಕದ ಜ್ಞಾನವನ್ನು ಮೈಗೂಡಿಸಿಕೊಳ್ಳಬೇಕು. 'ಒಬ್ಬ ಜೀವನಿಗೆ ಮತ್ತೊಬ್ಬ ಜೀವ ರಕ್ಷಕನಲ್ಲ. ಶ್ರೀಮನ್ನಾರಾಯಣನೊಬ್ಬನೇ ರಕ್ಷಕ' ಎಂಬ ದೃಢವಾದ ನಿಶ್ಚಯವಾಗಬೇಕು. ಇಂಥ ತತ್ತ್ವಜ್ಞಾನ ಉದಿಸ ಬೇಕಾದರೆ ಆಚಾರ್ಯ ಕಟಾಕ್ಷವಿಲ್ಲದೆ ಶಕ್ಯವಿಲ್ಲ. ಆದುದರಿಂದಲೇ 'ಆಚಾರ್ಯಾದಿಹ ದೇವತಾಂ ಸಮಧಿಕಾಂ ಅನ್ಯಾಂ ನಮನ್ಯಾಮಹೇ' ಎಂದು ಆಚಾರ್ಯರೇ ಉದ್ಘೋಷಿಸಿದ್ದಾರೆ. ತತ್ತ್ವಜ್ಞಾನವನ್ನು ಸಂಪಾದಿಸಲು ಆಚಾರ್ಯರನ್ನು ಆಶ್ರಯಿಸಬೇಕೆಂಬುದು ಅವರ ಉಪದೇಶದಲ್ಲಿ ಪ್ರಧಾನವಾದುದು.

ಆಚಾರ್ಯೋಪಾಸನೆಯಿಂದ ತತ್ತ್ವಜ್ಞಾನವನ್ನು ಪಡೆದು ಕೊಂಡವನು ಸರ್ವರಕ್ಷಕನಾದ ಭಗವಂತನಲ್ಲಿ ಪರಮಪುರುಷಾರ್ಥವನ್ನು ಬೇಡಬೇಕೆಂಬುದು ಆಚಾರ್ಯರ ಆಶಯ. 'ಅಸಾರಂ ಅಲ್ಪಸಾರಂಚ ಸಾರಂ ಸಾರತರಂ ತ್ಯಜೇತ್ ಭವೇತ್ಸಾರತಮಂ ಶಾಸ್ತ್ರೇರತ್ನಾಕರ ಇವಾಮೃತಂ' ಎಂಬ ಶ್ಲೋಕದಲ್ಲಿ ಇದನ್ನು ವಿಶದ ಪಡಿಸಿದ್ದಾರೆ. ಭಗವಂತನ ನಿತ್ಯಸಂಶ್ಲೇಷವೇ ಶೇಷಭೂತರಾದ ನಮಗೆ ಪರಮ ಪುರುಷಾರ್ಥ. ದೇಹಯಾತ್ರೆ ಆತ್ಮಯಾತ್ರೆಗೆ ಅಧೀನವಾಗಬೇಕು. ಆ ಗುರಿಯನ್ನು ಸಾಧಿಸಲು ಉಳಿದುವೆಲ್ಲ ಸಾಧನಮಾತ್ರವೆಂಬುದನ್ನು ಮನಗಾಣಬೇಕು. ಆಗ ನಾವು ಮಾಡುವ ಕೆಲಸಗಳೆಲ್ಲ ಅದಕ್ಕೆ ಅಂಗವಾಗಿ ವಿಹಿತವಾಗುವುದು. ಭಗವಂತನನ್ನು ಪಡೆಯಲು ಶರಣಾಗತಿಯೇ ಮಾರ್ಗವೆಂಬುದು ಆಚಾರ್ಯರ ನಿಶ್ಚಯಾಭಿಪ್ರಾಯ. ಅದಕ್ಕಾಗಿಯೆ 'ಪ್ರಪನ್ನಾದನ್ಯೇಷಾಂ ನ ದಿಶತಿ ಮುಕುಂದೋ ನಿಜಪದಂ' ಎಂದರವರು. ಈ ಪ್ರವೃತ್ತಿ ಸ್ವತಂತ್ರವಾ

ಗಿಯೋ ಅರ್ಥಾರ ಮುಖಾಂತರವಾಗಿಯೋ ಆಗಬಹುದು. 'ತಾವದಾರ್ತಿಸ್ತಥವಾಂಛಾ ತಾವನ್ಮೋಹಸ್ತಥಾ ಸುಖಂ, ಯಾವನ್ನ ಯಾತಿ ಶರಣಂ ತ್ವಾಮಶೇಷಾಘನಾಶನಂ' ಎಂಬಂತೆ ಈಶ್ವರನಲ್ಲಿ ಶರಣು ಹೋಗುವವರೆಗೆ ದುಃಖ ಮೋಹಾದಿಗಳಿರುವುದೇ ವಿನಾ ಅವನಲ್ಲಿ ನಮ್ಮ ಭಾರವನ್ನು ವಹಿಸಿದ ಮೇಲೆ ನಾವು ನಿರ್ಭರರೂ ನಿರ್ಭಯರೂ ಆಗುತ್ತೇವೆ ಎಂದು ಆಚಾರ್ಯರು ಸ್ಪಷ್ಟಪಡಿಸಿದ್ದಾರೆ.

ಭಗವಂತನಲ್ಲಿ ಶರಣನಾದ ಪ್ರಪನ್ನನ ನಿತ್ಯಜೀವನದ ಸ್ವರೂಪವನ್ನು ಆಚಾರ್ಯರು ತಮ್ಮ ರಹಸ್ಯತ್ರಯದಲ್ಲಿ ವಿಶದೀಕರಿಸಿದ್ದಾರೆ. ಪ್ರಪನ್ನನು ತನ್ನ ಬಾಳನ್ನು ತನಗೂ ಇತರರಿಗೂ ಹಿತವಾಗುವಂತೆ ನಡೆಸಬೇಕು. ಈಶ್ವರಭಕ್ತಿಯ ಪ್ರಭೆ ಅವನ ಎಲ್ಲ ಕಾರ್ಯಗಳಲ್ಲೂ ಬೆಳಗಬೇಕು. ನಾರಾಯಣಪರವಾದ ಜೀವನ ಅವನದಾಗಬೇಕು. ಹೀಗೆಂದ ಮಾತ್ರಕ್ಕೆ ಪ್ರಪಂಚವನ್ನೇ ಬಿಟ್ಟು ಅವನು ಓಡಿ ಹೋಗಬೇಕೆಂದಿಲ್ಲ. ಇಲ್ಲಿ ಎಲ್ಲರ ನಡುವೆ ಇದ್ದು ತನ್ನ ಬಾಳನ್ನು ಹಸನಾಗಿಸಬೇಕು. ಭಗವಂತನ ಆರಾಧನಾದಿಗಳಲ್ಲಿ ಮಗ್ನನಾಗಿ ಇಲ್ಲಿಂದಲೇ ಭಗವತ್ ಕೈಂಕರ್ಯ ರಸಾಸ್ವಾದನೆ ಮಾಡಬಹುದು. ಈ ಅಭಿಪ್ರಾಯವನ್ನು ಅವರು 'ವರದರಾಜ ಪಂಚಾಶತ್ತಿ'ನ ಕೆಳಗಿನ ಶ್ಲೋಕಗಳಿಂದ ವಿಶದಪಡಿಸಿದ್ದಾರೆ.

ತ್ವಂಚೇತ್ಪ್ರಸೀದಸಿ ತವಾಸ್ಮಿ
ಸಮೀಪತಶ್ಚೇತ್
ತ್ವಯ್ಯಸ್ತಿ ಭಕ್ತಿರನಘಾ ಕರಿಶೈಲನಾಥ ।
ಸಂಸೃಜ್ಯತೇ ಯದಿ ಚ
ದಾಸ ಜನಸ್ತ್ವದೀಯಃ
ಸಂಸಾರ ಏಷ ಭಗವನ್ನಪವರ್ಗ ಏವ ॥

ಶಾಸ್ತ್ರ ಶುದ್ಧ ಕರ್ಮಗಳನ್ನು ವಿಸರ್ಜಿಸಿ ವಿಹಿತವಾದ ಕರ್ಮಗಳನ್ನು ಬಿಡದೆ ಲೋಕಸಂಗ್ರಹಕ್ಕಾಗಿಯೂ ಈಶ್ವರಪ್ರೀತಿಗಾಗಿಯೂ ಶಾಸ್ತ್ರೀಯ ಪದ್ಧತಿಯನ್ನು ಅನುಸರಿಸಬೇಕು. ಲೋಕದಲ್ಲಿರುವಾಗ ಭಕ್ತರ ಸಹವಾಸದಲ್ಲಿ ಸಂತೋಷಿಸಿ ವಿರುದ್ಧರಾದವರಿಂದ ದೂರನಾಗಬೇಕು. 'ಪರಸ್ಪರ ಹಿತೈಷಿಣಾಂ ಪರಿಸರೇಷು ಮಾಂ ವರ್ತಯ' ಎಂಬುದು ಅವರ ಅನವರತ ಪ್ರಾರ್ಥನೆ. ತಾವು ಪಡೆಯುವ ಮಹತ್ಫಲದ ವಿಷಯದಲ್ಲಿ ನಮಗೆ ಸಂಪೂರ್ಣ ವಿಶ್ವಾಸವಿರಬೇಕು.

ಧರ್ಮಕ್ಕೆ ಅವಿರುದ್ಧವಾದುದರ ಸೇವನೆ ತಪ್ಪಲ್ಲ, ಆದರೆ ಅದೇ ಸರ್ವಸ್ವವೆಂಬ ಭಾವನೆ ಹೋಗಬೇಕು ಪ್ರಪನ್ನ ಮನೋಭಾವ ಹೀಗಿರಬೇಕೆಂಬುದನ್ನು ಆಚಾರ್ಯರು ಸ್ವನಿಷ್ಠಾಭಿಜ್ಞಾನಾಧಿಕಾರದಲ್ಲಿ ಹೇಳಿದ್ದಾರೆ. ಅದು ಭಗವದ್ಗೀತೆಯಲ್ಲಿ ಹೇಳಿರುವ ಸ್ಥಿತಪ್ರಜ್ಞ ಲಕ್ಷಣದಂತೆಯೇ ಇದೆ. ಪ್ರಪನ್ನನು ತತ್ತ್ವಹಿತ ಪುರುಷಾರ್ಥ ನಿಷ್ಠನಾಗಿ ಭಗವಂತನಲ್ಲಿ ಜ್ಞಾನ ಮತ್ತು ಭಕ್ತಿಗಳನ್ನು ಮಾತ್ರ ಆಶಿಸಬೇಕೆಂಬ ಆಚಾರ್ಯರ ಅಭಿಪ್ರಾಯ ಸರ್ವಾದರಣೀಯವಾಗಿದೆ.

ಪ್ರಪನ್ನನ ಕಾಲವೆಲ್ಲ ಸತ್ಕಾಲ. ಅವನಿಗೆ ಕಲಿಯೆಂಬುದೇ ಇಲ್ಲ ಆತನು ಭಗವಂತನ ಸೇವೆಯಲ್ಲಿ ತನ್ಮಯನಾಗುತ್ತಾನೆ. ಈ ಭಜನ ಸುಖವೇ ಅವನ ಸಾರಸರ್ವಸರ್ವಸ್ವ. ಸರ್ವರಲ್ಲಿ ನಿರ್ವೈರನಾಗಿ ಶಾಶ್ವತಧರ್ಮವನ್ನು ಸಂಗ್ರಹ ಮಾಡಿದ ಅವನಿಗೆ ಭಗವಂತನ ಸಾಕ್ಷಾತ್ಕಾರ ಸ್ವತಸ್ಸಿದ್ಧ. ಮಾನವಕೋಟಿ ಸಾಧಿಸಬೇಕಾದುದು ಇದನ್ನೇ, ಇತರ ಲಾಭನಷ್ಟಗಳು ಕಾದಾಚಿತ್ಕವಾದುವು. ಅಂಧಕಾರಮಯವಾದ ಈ ಲೋಕದಲ್ಲಿ ಆಚಾರ್ಯರು ಸತ್ಪಾತ್ರದಲ್ಲಿ ಪರಮಜ್ಞಾನಪ್ರದೀಪಗಳನ್ನು ಪ್ರತಿಷ್ಠೆಮಾಡಿ ತಾವು ನುಡಿದಂತೆ ನಡೆದು ಜ್ಞಾನವು ಅನುಷ್ಠಾನಪರ್ಯಂತವಾಗಬೇಕೆಂಬ ಸಂದೇಶವನ್ನು ಕ್ರಿಯಾತ್ಮಕವಾಗಿ ಅನುಗ್ರಹಿಸಿದ್ದಾರೆ. ಈ ಸಂದೇಶವು ತ್ರಿಕಾಲಾಬಾಧಿತವಾಗಿ ಮಾನವಕೋಟಿಯ ಉದ್ಧಾರಕ್ಕೆ ಸೂಕ್ತ ಮಾರ್ಗದರ್ಶಕವಾಗಿದೆ.



---

**ತಿರುಮಲೆಯಲ್ಲಿ ಈಚೆಗೆ ಬಾಲಾಜಿನಗರದ ಉದ್ಘಾಟನೆ ಆಯಿತು. ಎಡಗಡೆಯ ಕೊನೆಯಲ್ಲಿ ಶ್ರೀ ಬಿ. ನಾಗಿರೆಡ್ಡಿ, ಹಾಗೂ ಉದ್ಘಾಟನಾಫಲಕದ ಎಡಬದಿಯಲ್ಲಿ ಶ್ರೀ ಪಿ. ಎಸ್. ರಾಜಗೋಪಾಲರಾಜು ಅವರನ್ನು ಕಾಣಬಹುದು.**



ಯುವವಾಣಿ

# ಚೀನಾದಲ್ಲಿ ಹಿಂದೂ ಧರ್ಮದ ಪ್ರಭಾವ



ತಮ್ಮ ಧಾರ್ಮಿಕ ಜೀವನದಲ್ಲಿ ಚೀನೀಯರು ದಾವ್ ಎಂಬ ಸನಾತನ ಧರ್ಮ, ಕಾನ್‌ಫ್ಯೂಷಿಯಸ್‌ನ ನೈತಿಕ ಧರ್ಮ ಮತ್ತು ವೈಷ್ಣವ ಭಕ್ತಿಯ ಶಾಖೆಯಾದ ಮಹಾಯಾನ ಬೌದ್ಧ ಧರ್ಮವನ್ನು ಸಮಾನವಾಗಿ ಆಚರಿಸುವರು. ಭಾರತೀಯರಂತೆಯೇ ಚೀನೀಯರೂ ದೇವಿದೇವತೆಗಳನ್ನೂ ಅಷ್ಟದಿಕ್ಪಾಲಕರನ್ನೂ ಪಿತೃಗಳನ್ನೂ ಅವತಾರ ಪುರುಷರನ್ನೂ ಮಂತ್ರ ತಂತ್ರ ಜಪ ಮತ್ತು ಷೋಡಶೋಪಚಾರಗಳಿಂದ ಪೂಜಿಸಿ ಗೌರವಿಸುವರು. ಅವರ ವಿಶ್ವ ಸೃಷ್ಟಿ, ಪುನರ್ಜನ್ಮ, ಕರ್ಮಸಿದ್ಧಾಂತ; ಯಜ್ಞಯಾಗಾದಿಗಳು ಮತ್ತು ಜನರ ಸುಖ ದುಃಖಗಳಲ್ಲಿ ದೈವೀಶಕ್ತಿಯ ಮಹತ್ವ ಮೊದಲಾದ ವಿಚಾರಗಳೂ ಬಹಳ ಮಟ್ಟಿಗೆ ಹಿಂದೂಗಳ ನಂಬಿಕೆಗಳನ್ನೇ ಹೋಲುತ್ತವೆ. ಚೀನೀಯರ ಸನಾತನ ಧರ್ಮವಾದ ದಾವ್ ಭಾರತೀಯ ವೇದೋಪನಿಷತ್ತುಗಳ ವಿಚಾರಗಳನ್ನೇ ಒಳಗೊಂಡಿದೆ. ಉದಾಹರಣೆಗೆ ಸೃಷ್ಟಿಯ ವಿಚಾರಸರಣಿಯು ಪುರುಷ ಸೂಕ್ತ ಮತ್ತು ಭಾರತೀಯ ಪೌರಾಣಿಕ ವಿವರಣೆಗಳಂತೆಯೇ ಇರುವುದನ್ನು ಕಾಣಬಹುದು, ಚೀನೀಯರ ಐತಿಹ್ಯದಂತೆ ಆದಿಯಲ್ಲಿ ಏಕಾರ್ಣವರೂಪೀ ಮೂಲ ಪ್ರಕೃತಿ ಮತ್ತು 'ತಿಎನ್‌ದಿ' ಎಂಬ ದಿವ್ಯಶಕ್ತಿ ಮಾತ್ರ ಇದ್ದವು. ಈ ದಿವ್ಯ ಶಕ್ತಿಯು ಜೀ ಎಂಬ ಅಮೃತತತ್ವದೊಡನೆ ಸೇರಿದ್ದರಿಂದ ಯಾಂಗ್ ಮತ್ತು ಯಿನ್ ಎಂಬ ಪುಂ, ಸ್ತ್ರೀ ಆಕಾಶ ಹಾಗೂ ಪೃಥ್ವೀ ತತ್ತ್ವಗಳು ಉದ್ಭವಿಸಿ, ಅವುಗಳ ಮಿಲನದಿಂದ ಪಾನ್‌ಗೂ ಎಂಬ ವಿರಾಟ್ ಪುರುಷ, ನೀಳವಾದ ವ್ಯಾಳ, ಏಕಶೃಂಗೀ ಮತ್ತು ವಿವಿಧ ವರ್ಣದ ವಿಚಿತ್ರ ಪಕ್ಷಿಗಳು ಕಾಣಿಸಿಕೊಂಡವು. ಈ ವಿರಾಟ್ ಪುರುಷನಿಂದ ವಿಶ್ವದ ವಿವಿಧ ಭಾಗಗಳು ರೂಪುಗೊಂಡವು. ಪಾನ್‌ಗೂವಿನ ಉಸಿರು, ಗಾಳಿ ಮತ್ತು ಮೋಡಗಳಾದವು. ಎಡ ಬಲಗಣ್ಣುಗಳು ಸೂರ್ಯ ಮತ್ತು ಚಂದ್ರರಾದವು. ಆತನ ಗಡ್ಡ ಮೀಸೆಗಳು ನಕ್ಷತ್ರಗಳಾದವು. ಆವನ ಕೈಕಾಲುಗಳೇ ದಿಕ್ಕುಗಳಾಗಿ ರೂಪುಗೊಂಡವು. ದೇಹ, ಮಾಂಸ, ನರ, ನಾಡಿಗಳು ಪರ್ವತ, ಮಣ್ಣು, ಗಿಡ, ಮರ, ಹುಲ್ಲಾಗಿ ಮಾರ್ಪಟ್ಟವು. ಪವಿತ್ರ ವ್ಯಾಳವು ಪೂರ್ವದಿಕ್ಕಿನ ಅಧಿಷ್ಠಾತೃ ದೇವತೆ. ಅದು ಭೂಮಿಯೊಳಗೆ ನೀರನ್ನಾವರಿಸಿರುವುದರಿಂದ ನೆಲವನ್ನು ಅಗೆದಾಗ ಅದಕ್ಕೆ ಪೆಟ್ಟಾದರೆ ಅದಕ್ಕೆ ಕಾರಣವಾದವರು ಮೃತಿಹೊಂದುವರು. ಪವಿತ್ರ ದಿವ್ಯ ಪಕ್ಷಿಯು ದಕ್ಷಿಣ ದಿಕ್ಕು, ಸೂರ್ಯ ಮತ್ತು ಶಾಖದ ಅಧಿಷ್ಠಾತೃ. ಉತ್ತರ ದಿಕ್ಕಿನ ಅಭಿಮಾನಿಯಾದ ಪವಿತ್ರ ಆಮೆಯು ಚಳಿಗಾಲ ಮತ್ತು ದೀರ್ಘಾಯುಷ್ಯದ ಅಧಿಷ್ಠಾತೃ. ಮಂಗಳ ಮೂರ್ತಿಯಾದ ಏಕಶೃಂಗಿಯು ಪಶ್ಚಿಮ ದಿಕ್ಕಿನ ಅಧಿಷ್ಠಾತೃ ದೇವತೆ. ಭೂಮಿಯ ಸುತ್ತ ಸಂಚರಿಸುವ ಸೂರ್ಯ, ಚಂದ್ರ ಮತ್ತು ಇಪ್ಪತ್ತೆಂಟು ನಕ್ಷತ್ರ ಸಮೂಹಗಳು ತಮ್ಮ ಪ್ರಕಾಶ ಶಕ್ತಿಯ ಮೂಲಕ ಮಾನವರ ವರ್ತಮಾನಗಳ ಮೇಲೆ ಪ್ರಭಾವ ಬೀರುವುವು. ದುಷ್ಟಶಕ್ತಿಗಳ ಪ್ರಭಾವ ತಪ್ಪಿಸಲು ಮಂತ್ರ, ತಂತ್ರ, ಧ್ಯಾನ, ಜಪ, ಪಿತೃಪೂಜೆ ಮತ್ತು ಆಧ್ಯಾತ್ಮಿಕ ಜ್ಞಾನಗಳು ಅತ್ಯಾವಶ್ಯಕ. ದೇಶದ ಪ್ರಗತಿ ಮತ್ತು ರಕ್ಷಣೆಗೆ ಸಹಾಯ ಮಾಡಿದ ಸಂತರನ್ನೂ ವೀರರನ್ನೂ ಚೀನೀಯರು ಅವತಾರ ಪುರುಷರಂತೆ ಪೂಜಿಸುವರು. ಸನಾತನ ಧರ್ಮದ ಪುನರುದ್ಧಾರಕನಾದ ಲಾವ್ರೋತ್ಸ್, ನೀತಿಮಾರ್ಗ ಪ್ರತಿಷ್ಠಾಪಕನಾದ ಕಾನ್‌ಫ್ಯೂಷಿಯಸ್ ಮತ್ತು ಮುಕ್ತಿಮಾರ್ಗದರ್ಶಿಯಾದ

**ಎಸ್. ವೇಣುಗೋಪಾಲಾಚಾರ್ಯ**

ಗೌತಮ ಬುದ್ಧನನ್ನು ಚೀನೀಯರು ತಮ್ಮ ಪ್ರಧಾನ ಗುರುಗಳೆಂದು ಭಾವಿಸಿ ಪೂಜಿಸುತ್ತಾರೆ. ದಾವ್ ಎಂದರೆ ದೇವ ಮಾರ್ಗ ಮತ್ತು ಸರ್ವವ್ಯಾಪ್ತ, ಸರ್ವಶಕ್ತ ಹಾಗೂ ಜ್ಞಾನಾತೀತ ಅಗೋಚರ ತತ್ತ್ವ. ಈ ನಿರಪೇಕ್ಷ ದಾವ್ ಪ್ರಕೃತಿಯ ನಿಯಮಗಳಲ್ಲಿ ವ್ಯಕ್ತವಾಗುವುದರಿಂದ ಅವುಗಳನ್ನು ಚೆನ್ನಾಗಿ ಅರಿತು ಅವುಗಳೊಡನೆ ಸಹಕರಿಸುವುದರಿಂದ ಮಾನವರು ಭೌತಿಕ ಶರೀರದಿಂದ ಮುಕ್ತರಾಗಿ ಅಮೃತತ್ತ್ವ ಪಡೆದು ಆ ದಿವ್ಯ ಪ್ರಕಾಶ ರೂಪವಾದ ಪರತತ್ತ್ವದ ಸುತ್ತಲೂ ಸಂಚರಿಸುತ್ತ ಬ್ರಹ್ಮಾನಂದ ಪಡೆಯುವರು. ದಾವ್ ದೇವಾಲಯಗಳಲ್ಲಿ ವಿರಾಟ್ಪುರುಷನಾದ ಪಾನ್‌ಗೂ, ವಿಶ್ವಾಧ್ಯಕ್ಷನಾದ ದಾವ್ ಮತ್ತು ದಾವ್ ಧರ್ಮದ ಪುನರುದ್ಧಾರಕನಾದ ಲಾವೋತ್ಸ್ ಹಾಗೂ ಈ ಧರ್ಮವನ್ನು ಪಾಲಿಸಿ ಅಮರತ್ವ ಪಡೆದ ಕೆಳಗೆ ತಿಳಿಸಿರುವ ಎಂಟು ಮಹಾಪುರುಷರಿಗೆ ಪೂಜೆ ಸಲ್ಲುತ್ತದೆ.

1. ಸತ್ತವರನ್ನು ಬದುಕಿಸುತ್ತಿದ್ದ ಚಂಗ್‌ಲಿ ಚ್ಯು ಆನ್.

2. ಅದೃಶ್ಯ ಶಕ್ತಿಯಿದ್ದ ಚಂಗ್‌ಗ್ವೋ ಲಾವ್.

3. ರೋಗನಿವಾರಕ ಲುತುಂಗ್ ಬಿನ್.

4. ಪರಕಾಯ ಪ್ರವೇಶಿಸುತ್ತಿದ್ದ ಲೀ ತೆಯೆಗ್ವೈ.

5. ಸಾಹಿತ್ಯ ನಾಟಕಗಳ ಅಭಿಮಾನಿ ತ್ಸಾವ್ ಗ್ವೋ.

6. ಸಂಗೀತದ ಅಭಿಮಾನಿ ಹಾನ್ ಪಿ ಯಾಂಗ್ ತ್ಯಾ.

7. ಫಲ ಪುಷ್ಪಗಳ ಅಭಿಮಾನಿ ಲಾನ್ ತ್ಸೈ ಹೋ.

8. ಗೃಹಸ್ಥ ಜೀವನದ ಅಭಿಮಾನಿ ಹೋ ಶಿಯೆನ್ ಗೂ.

ಕ್ರಿಸ್ತಪೂರ್ವ 2953 ರಿಂದ ಕ್ರಿ.ಪೂ. 2838ರ ವರೆಗೆ ಆಳಿದ ಫೂಷಿಯು ಯಜ್ಞಯಾಗಾದಿಗಳಿಂದ ದಿವ್ಯ ಶಕ್ತಿಗಳ ಆರಾಧನೆ ನಡೆಸುವ ಏರ್ಪಾಡು ಮಾಡಿದನು. ಕ್ರಿ.ಪೂ-2698–2598 ರಲ್ಲಿ ಆಳಿದ ಹಳಿದೀ ಚಕ್ರವರ್ತಿಯು ಪರಮಾತ್ಮನ ಪೂಜೆಗಾಗಿ ದೇವಾಲಯ ಕಟ್ಟಿಸಿ ಧೂಪಾರಾಧನೆ ನಡೆಸುತ್ತಿದ್ದನು. ಪರ್ವತ, ನದಿ, ಗ್ರಹಗಳ ಹಾಗೂ ಪಿತೃಗಳ ಪೂಜಾ ವಿಧಿಗಳನ್ನು ನಿಯಮಿಸಿದನು. ಕ್ರಿ.ಪೂ. 2514–2436 ರಲ್ಲಿ ಆಳಿದ ಚಕ್ರವರ್ತಿ ಚ್ಯು ಆನ್ ಷೂ ಪೂಜೆಯ ಸಮಯದಲ್ಲಿ ಸಂಗೀತದ ವ್ಯವಸ್ಥೆಯನ್ನೂ ಕ್ರಿ. ಪೂ. 2357 – 2255 ರ ವರೆಗೆ ಆಳಿದ ಯಾವ್ ಎಂಬ ಚಕ್ರವರ್ತಿಯು ವಿಶೇಷ ಯಜ್ಞಗಳ ಸಮಯದಲ್ಲಿ ನೃತ್ಯಗಳನ್ನೂ, ಏರ್ಪಡಿಸಿದರು. ಕ್ರಿ. ಶ. 2838 ರಿಂದ 2698 ರ ವರೆಗೆ ಆಳಿದ ಷೆನ್ ನ್ಯಾಂಗ್ ಮತ್ತು ಚೌ ವಂಶದ ಮೂಲ ಪುರುಷ ಹೌಚಿ ಎಂಬುವವರು ವ್ಯವಸಾಯ ಉದ್ಯೋಗಗಳನ್ನು ಅಭಿವೃದ್ಧಿಗೊಳಿಸಿದ್ದರಿಂದ ದಾವ್ ದೇವಾಲಯಗಳಲ್ಲಿ ಇವರಿಗೂ ಪೂಜೆ ಸಲ್ಲುತ್ತದೆ. ನೀತಿ ಬೋಧಕನಾದ ಕಾನ್ ಫ್ಯೂಷಿಯಸ್ ದೇವ ಮತ್ತು ಪಿತೃ ಯಜ್ಞಗಳೂ ನೈತಿಕ ಜೀವನ ನಡೆಸುವುದೂ ಶ್ರೇಯಸ್ಕರವೆಂದು ಬೋಧಿಸಿದನು. ಕಾನ್ ಫ್ಯೂಷಿಯಸ್‌ನ ದೇವಾಲಯಗಳಲ್ಲಿ ಪ್ರತಿ ವರ್ಷವೂ ಎರಡು ಮತ್ತು ಎಂಟನೆಯ ತಿಂಗಳುಗಳಲ್ಲಿ ಕಾನ್‌ಫ್ಯೂಷಿಯಸ್‌ನ ತೃಪ್ತಿಗಾಗಿ ಮೂವತ್ತಾರು ಅಥವಾ ಅರವತ್ತು ನಾಲ್ಕು ಯಾಜಕರಿಂದ ಸಂಗೀತ ನೃತ್ಯಗಳೊಡನೆ ಹವನ, ಯಾಗ ನಡೆಸುವ ವ್ಯವಸ್ಥೆ ಮಾಡುತ್ತಾರೆ.

ಕ್ರಿಸ್ತಶಕದಾರಂಭದಿಂದ ಚೀನಾದಲ್ಲೆಲ್ಲಾ ಬೌದ್ಧ ಹಿಂದೂ ದೇವಾಲಯಗಳಲ್ಲೂ, ಪ್ರತಿಯೊಂದು ನಗರದ ಹೊರಗಡೆಯ ಸನ್ಯಾಸಿಗಳ ತಪೋವನಗಳಲ್ಲೂ ಭಾರತೀಯ ದೇವೀದೇವತೆಗಳ ಹಾಗೂ ಬೋಧಿಸತ್ವರ ಪೂಜೆಗಳೂ ಹಬ್ಬ ಹುಣ್ಣಿಮೆಗಳೂ ಆಚರಿಸಲ್ಪಡತೊಡಗಿದವು. ಇವುಗಳಲ್ಲಿ ತೇಗದ ಮರದ ಕಂಬಗಳಿಂದ ಆಧಾರಿತವಾದ ಕೆತ್ತನೆಯ ಕೆಲಸದ ಮೇಲ್ಛಾವಣಿಗಳುಳ್ಳ ಶಾಂತವಾತಾವರಣದ ಗುಹೆಗಳಲ್ಲಿ ದಿಕ್ಪಾಲಕರು, ಶಾಕ್ಯಮುನಿ ಮತ್ತು ಹದಿನೆಂಟು ಬೋಧಿಸತ್ವರ ಹಾಗೂ ಅವಲೋಕಿತೇಶ್ವರ ಅಥವಾ ಅಮಿತಾಭ ಎಂಬ ಹೆಸರುಳ್ಳ ವಿಷ್ಣುವಿನ ಮೂರ್ತಿ, ಗ್ವಾನ್ ಮಿನ್ ಎಂಬ ಅರ್ಧನಾ

---

ರೀಶ್ವರ, ಗ್ವೈಯಿನ್ ಎಂಬ ಮಹಾಕಾಳಿ ಮೊದಲಾದವರ ತಾಂತ್ರಿಕ ಪೂಜೆ ನಡೆಯುತ್ತವೆ. ಇದಲ್ಲದೆ ಚೀನೀಯರು ಭೂಮಾತೆಯನ್ನೂ, ಸ್ವರ್ಗದ ಅಪೌರುಷೇಯ ಶಕ್ತಿಗಳನ್ನೂ, ದಿಕ್ಕುಗಳನ್ನೂ, ಬೌದ್ಧಶಾಸ್ತ್ರಗಳ ರಕ್ಷಕರಾದ ನಾಲ್ಕು ದೇವತೆಗಳನ್ನೂ, ಪೂಜಿಸುತ್ತಾರೆ. ವೈಷ್ಣವಭಕ್ತಿಯ ಪ್ರಭಾವದಿಂದ ಉದ್ಭವಿಸಿದ ಮಹಾಯಾನದ ಸಿದ್ಧಾಂತದಂತೆ ಅಹಿಂಸೆ, ತ್ಯಾಗ ಮತ್ತು ಸುಖೀ ಜೀವನನಡೆಸಲು ಮಾರ್ಗದರ್ಶನ ಮಾಡಿದವರೆಲ್ಲರೂ ದೇವರಂತೆ ಪೂಜಾರ್ಹರು. ಮೇಲೆ ಹೇಳಿದ ದೇವತೆಗಳಲ್ಲದೆ ನಾರಾಯಣ, ಶಿವಲಿಂಗ, ಇರಾನಿನ ಮಿತ್ರ, ಮೈತ್ರೇಯ ಮೊದಲಾದವರಿಗೂ ಪೂಜೆಸಲ್ಲುತ್ತದೆ. ಕುಮಾರಜೀವನ ಮಹಾಯಾನ ಗ್ರಂಥಗಳೂ ಬೋಧಿಧರ್ಮನ ಧ್ಯಾನ ಪ್ರಧಾನಗ್ರಂಥಗಳೂ ಅಮೋಘವಜ್ರನ ತಂತ್ರಪ್ರಧಾನ ಗ್ರಂಥಗಳೂ ಚೀನಿಯರ ತಮೋ (ಧಮ್ಮ) ಮತ್ತು ಚಾನ್ (ಧ್ಯಾನ) ಹಾಗೂ ಜಪಾನೀಯರ ಜೆನ್ (ಧ್ಯಾನ)ದ ಮೂಲಗ್ರಂಥಗಳು, ಪೂರ್ವಾಭಿಮಾನೀ ದೇವತೆಯ ಮೂರ್ತಿಯ ಕೈಗಳಲ್ಲಿ ಮಾಯಾಕತ್ತಿ, ಈಟಿ ಮತ್ತು ಮಣಿಮಯ ಉಂಗುರವೂ, ಪಶ್ಚಿಮಾಭಿಮಾನೀ ದೇವತೆಯ ಕೈಯಲ್ಲಿ ನಾಲ್ಕು ತಂತಿಗಳ ವೀಣೆಯೂ, ಬೆಳೆಯ ಅಧಿಪತಿಯಾದ ದಕ್ಷಿಣಾಭಿಮಾನೀ ದೇವತೆಯ ಕೈಯಲ್ಲಿ ಅದ್ಭುತ ಮಣಿಮಯ ಛತ್ರಿಯೂ, ಉತ್ತರ ದಿಕ್ಪಾಲಕ ದೇವತೆಯ ಹತ್ತಿರ ಇಲಿ ಹಾವು ಮತ್ತು ಎರಡು ಚಾವಟಿಗಳೂ ಇರುತ್ತವೆ. ಸಪ್ತರ್ಷಿಮಂಡಲದಲ್ಲಿ ವಾಸಿಸುವ ಸಮುದ್ರಯಾನಕ್ಕೆ ಸಹಾಯಕಿಯಾದ ಧ್ಯಾನ ದೇವೀ ಮರೀಚಿಯ ಎಂಟು ಭುಜಗಳಲ್ಲಿ ಎಂಟು ಆಯುಧಗಳಿರುತ್ತವೆ. ಧೈರ್ಯ, ಜ್ಞಾನ, ತ್ಯಾಗ ಮತ್ತು ಸದ್ಗುಣಗಳ ಮೂರ್ತಿಯಾದ ಮಂಜುಶ್ರೀ ಮೂರ್ತಿಯ ಕೈಯಲ್ಲಿ ಕತ್ತಿಯೂ ಕಮಲದ ಮೇಲಿರುವ ಪುಸ್ತಕವೂ ಇದ್ದು ಆತನ ಪೂಜೆಯಿಂದ ಸುಖ ಸೌಭಾಗ್ಯದೊರೆಯುವುದೆಂಬ ಭಾವನೆಯಿದೆ.

ಎಲ್ಲಾ ವಿಧವಾದ ಭಯ ದುಃಖಗಳ ನಿವಾರಣೆಗೂ ಐಶ್ವರ್ಯ ಮತ್ತು ಪುತ್ರಪ್ರಾಪ್ತಿಗೂ ಚೀನೀಯರೆಲ್ಲರೂ ಗ್ವಾನ್ ಯಿನ್‌ಗೆ ಮೊರೆಯಿಡುತ್ತಾರೆ. ಹನ್ನೆರಡರನೆಯ ಶತಮಾನಕ್ಕೆ ಹಿಂದೆ ಗ್ವಾನ್ ಯಿನ್ ಪುರುಷಾಕಾರದ ಮೂರ್ತಿಗೆ ಪೂಜೆಸಲ್ಲುತ್ತಿತ್ತು. ಈಗ ಗ್ವಾನ್‌ಯಿನ್‌ನ ಸ್ತ್ರೀಮೂರ್ತಿಯ ಪೂಜೆಗೇ ಪ್ರಾಧಾನ್ಯ. ಸಹಸ್ರಾಕ್ಷಿ ಗ್ವಾನ್‌ಯಿನ್‌ನ ಆಸನ ಹುಲಿಯಚರ್ಮ. ತೊಡೆಯ ಮೇಲೆ ಎಳೆಯ ಮಗು, ಮುಂದೆ ಎರಡು ಚಿಕ್ಕ ಮಕ್ಕಳು, ಬಲಗಡೆ ಹಣ, ಎಡಗಡೆ ಹಾರ ಹಿಡಿದಿರುವ ಪಕ್ಷಿ. ಈ ಮಹಾದೇವಿಯನ್ನು ಹೆಂಗಸರು ಪುತ್ರಪ್ರಾಪ್ತಿಗೂ ನಾವಿಕರು ಸುಖ ಸಂಚಾರಕ್ಕೂ ಅತ್ಯಧಿಕವಾಗಿ ಬೇಡುತ್ತಾರೆ. ಆಕೆಯ ಸ್ತೋತ್ರವನ್ನು ಆಲಿಸಿ, "ಮಿಂಚಿಗೆ ಪ್ರಕಾಶ ನೀಡುವ ಕರುಣಾಮಯಿಯಾದ ಹೇ ಪವಿತ್ರ ಮಹಾತಾಯಿ, ಎಲ್ಲರನ್ನೂ ಕಾಪಾಡುವ ಮಳೆ ತರುವ ಮೋಡದಂತೆ ಉದಾರಿಯೇ! ಯುದ್ಧ ಸಂಘರ್ಷ ಮತ್ತು ಶತ್ರುಗಳ ಭಯ ನೀಗಿಸುವವಳೇ, ಮೃತ್ಯು ಪರ್ಯಂತ ನಿನ್ನ ಭಕ್ತಿ ಸ್ಮರಣೆ ಶಾಶ್ವತವಾಗಿರಲಿ. ಹೇ ಮಹಾಸಾಧ್ವಿ ಕರುಣಾಸಾಗರೆ, ಸಾಷ್ಟಾಂಗ ನಮಸ್ಕಾರಗಳಿಂದ ಸ್ತುತಿಸುವ ನನ್ನನ್ನು ಮೃತ್ಯು ಮತ್ತು ಆಪತ್ತುಗಳಿಂದ ರಕ್ಷಿಸಿ ನನ್ನ ಕರ್ತವ್ಯ ನಿರ್ವಹಣೆಗೆ ಸಹಾಯಕಳಾಗಿರು.'' ಚೀನೀಯರು ಬುದ್ಧನೊಡನೆ ಪೂಜಿಸುವ ಹದಿನೆಂಟು ಬೋಧಿಸತ್ತ್ವರಲ್ಲಿ ಹದಿನಾರು ಭಾರತೀಯ ಹಾಗೂ ಇಬ್ಬರು ಚೀನೀಸಂತರು ಮಂಡಲಾಕಾರದಲ್ಲಿ ತಮ್ಮ ಚಿಹ್ನೆಗಳನ್ನು ಧರಿಸಿ ಸ್ಥಿರಾಸನದಲ್ಲಿ ಯೋಗಾರೂಢರಾದವರು. ಇವರೆಲ್ಲರೂ ನೂರಾರು ಅರ್ಹತರನ್ನು ಹೊಂದಿದ್ದು ನಿರ್ವಾಣ ಪಡೆದವರೆಂದು ಚೀನೀಯರ ನಂಬಿಕೆ. ಈ ಬೋಧಿ ಸತ್ತ್ವರು ಒಂಬತ್ತು ಮುದ್ರೆಗಳನ್ನೂ ಕಮಲ ಶಂಖ ಧರ್ಮ ಚಕ್ರ ಮೊದಲಾದ ಎಂಟು ಮಂಗಳ ಚಿಹ್ನೆಗಳನ್ನೂ ಧರಿಸಿರುತ್ತಾರೆ.

ಚೀನೀಯರು ನಗರಗಳ ಹತ್ತಿರವಿರುವ ತಪೋವನಗಳಲ್ಲಿ ಮಂಡಲದ ಪೂಜೆಗೆ ಮಂತ್ರ ತಂತ್ರ ಜಪ ಮತ್ತು ಧ್ಯಾನ ದೀಪ ಧೂಪಾದಿಗಳನ್ನು ಬಳಸುತ್ತಾರೆ. ಮಂತ್ರಕ್ಕೆ ಚೀನೀಯಲ್ಲಿ ಚೌ ಎಂದೂ ಜಪಾನೀ ಭಾಷೆಯಲ್ಲಿ ನಿಯೆನ್‌ಫೊ ಎಂದೂ ಧ್ಯಾನಕ್ಕೆ ಕ್ರಮೇಣ ಚಾನ್ ಮತ್ತು ಜೆನ್ ಎಂದೂ ಹೆಸರು. ಷಿನ್ ಗಾನ್ ತಪೋವನದ "ಓಂಗ್ ಕಲ ಕಲ ಸಂದರೀ ಮಾತಂಗೀ ಸಾವಕಾ'' ಎಂಬ ಮಂತ್ರವನ್ನು ಭಯ ನಿವಾರಣೆಗಾಗಿ ಬಳಸುತ್ತಾರೆ. ಸ್ವಾಹಾ ಶಬ್ದದ ಚೀನೀ ರೂಪ ಸಾವಕಾ ಮತ್ತು ಜಪಾನೀ ರೂಪ ಸೋಹಾ. ಓಂಕಾರದಿಂದ ಆರಂಭವಾಗುವ ಮಂತ್ರಗಳಲ್ಲಿ "ಓಂ ಮಣಿ ಪದ್ಮೇ ಹಂ'' ಎಂಬುದು ಬಹಳ ಶಕ್ತಿಯುತವೆಂದು ಭಾವಿಸಲ್ಪಡುತ್ತದೆ. ಹೊಲಗದ್ದೆಗಳಲ್ಲಿ ಕೆಲಸಮಾಡುವಾಗಲೂ ಸಂಚಾರಮಾಡುವಾಗಲೂ ಚೀನಾ ಟಿಬೆಟ್‌ಗಳಲ್ಲಿ ಜನರು ಈ ಮಂತ್ರವನ್ನು ಜಪಿಸುವುದಲ್ಲದೆ ಅಂಗಡಿಗಳ ಕಿಟಕಿಗಳಲ್ಲೂ ತಿರುಗುವ ಯಂತ್ರಗಳಲ್ಲೂ ಎಲ್ಲರಿಗೂ ಕಾಣುತ್ತಿರುವಂತೆ ಈ ಮಂತ್ರವನ್ನು ದೊಡ್ಡದಾಗಿ ಪ್ರದರ್ಶಿಸುವಂತೆ ಬರೆದಿರುತ್ತಾರೆ. ಇದು ಪರಮಕರುಣಾಮಯಿ ಅವಲೋಕಿತೇಶ್ವರನ ಮಂತ್ರ. ಇದು ಮಂಗೋಲಿಯದಲ್ಲಿ ಚೆನ್‌ರಶಿಗ್‌ನ ಮಂತ್ರವೆಂದೂ ಟಿಬೆಟ್ ಮತ್ತು ಜಪಾನ್‌ಗಳಲ್ಲಿ ಗ್ವಾನ್ ಯಿನ್ ಅಥವಾ ಕಾನ್ನನ್‌ನ ಮಂತ್ರವೆಂದೂ ಪ್ರಸಿದ್ಧಿಯಿದೆ. ಅಮಿತಾಭನ ದಿವ್ಯರೂಪಗಳಲ್ಲೊಂದಾದ ಅವಲೋಕಿತೇಶ್ವರನ ಧ್ಯಾನ ಮೂರ್ತಿಯ ನಾಲ್ಕು ಭುಜಗಳಲ್ಲಿ ಎರಡರ ಮಧ್ಯೆ ವಜ್ರಮಣಿಯೂ ಎತ್ತಿರುವ ಕೈಗಳಲ್ಲಿ ಕಮಲ ಹಾಗೂ ಸ್ಫಟಿಕ ಮಣಿಗಳ ಸರವೂ ಇರುತ್ತವೆ. ಮೂರ್ತಿಯ ಬಣ್ಣ ಬಿಳುಪು. ಷಿನ್‌ಗಾನ್ ತಪೋವನದ ಪೂಜಾಮಂದಿರದಲ್ಲಿ ಪೂಜೆಗಾಗಿ ಪ್ರವೇಶಿಸುವವರು ಕಿಟಕಿಗಳ ಕಡೆ ತಿರುಗಿಕೊಂಡು ಶುದ್ಧೀಕರಣದ ಮುದ್ರೆಗಳನ್ನು ಪ್ರದರ್ಶಿಸಿ ಮಂಡಲದಕಡೆ ತಿರುಗಿ ಮೂರು ಸಲ ತಲೆಯನ್ನು ನೆಲಕ್ಕೆ ಮುಟ್ಟಿಸಿ ನಮಸ್ಕಾರ ಮಾಡಿದ ನಂತರ ಸುತ್ತಲೂ ಹಾಸಿರುವ ದಿಂಬುಗಳ ಮೇಲೆ ಪದ್ಮಾಸನಗಳಲ್ಲಿ ಕೂಡುವರು, ವೇದಿಕೆಯ ಹತ್ತಿರವಿರುವ ಅರ್ಚಕರು ಧೂಪ ದೀಪ ಗಂಟೆ ಸಂಗೀತ ವಾದ್ಯಗಳ ಮಧ್ಯೆ 3-7-21 ಅಥವಾ 108 ಸಲ ಮಂತ್ರಗಳೊಂದಿಗೆ ಮುದ್ರೆಗಳ ಪ್ರದರ್ಶನ ಮಾಡುತ್ತಾ ಸುಮಾರು ಒಂದು ಒಂದೂವರೆ ಗಂಟೆಗಳ ಕಾಲ ಪೂಜೆ ನಡೆಸಿ ನಗಾರೆ ಬಡಿತಕ್ಕೆ ಅನುಗುಣವಾಗಿ ನೂರೆಂಟು ಸಲ ಎಲ್ಲರೂ

'ಬ್ರಂಗ್' 'ಬ್ರಂಗ್' ಎಂದು ಗಟ್ಟಿಯಾಗಿ ಉಚ್ಚರಿಸಿ ನಮಸ್ಕರಿಸಿ ಪೂಜೆ ಮುಗಿಸಿ ತೆರಳುವರು. ಬ್ರಂಗ್ ಶಬ್ದವು "ಬ್ರಹ್ಮ" ಶಬದ ವಿಕೃತ ರೂಪ. ಹಾಗೆಯೇ ಓಂಕಾರವು ಏಷ್ಯಾದ ವಿವಿಧ ಭಾಗಗಳಲ್ಲಿ ಓಂಗ್ ಊಂಗ್, ಆಂಗ್, ಇತ್ಯಾದಿ ರೂಪಗಳಲ್ಲಿ ಜಪಿಸಲ್ಪಡುತ್ತದೆ. ಈ ಶಬ್ದವು ವಿಶ್ವದ ಎಲ್ಲಾ ಶಬ್ದಗಳ ಸಮೂಹ, ಪರಮ ತತ್ತ್ವವಾದ ಧರ್ಮಕಾಯ ಹಾಗೂ ಸೃಷ್ಟಿಯ ಮೂಲ ಕಾರಣ ವೆಂದೂ 'ಮಣಿಪದ್ಮೇಹಂ' ಎಂದರೆ ನಮ್ಮ ಹೃದಯಾಂತರ್ಗತನಾದ ಎಂದೂ ವಜ್ರಮಣಿಯೋಪಾದಿಯಾದ ಜ್ಞಾನ ಮತ್ತು ದಯಾಮಯಿ ಬುದ್ಧನು ಅಹಂಕಾರವನ್ನು ನೀಗಿಸಿ ಅಮೃತತ್ತ್ವ ಕೊಡುವುದೆಂದು ಚೀನೀಯರು ನಂಬುತ್ತಾರೆ. ದಾವ್ ಧರ್ಮಾವಲಂಬಿಗಳು 'ಓಂ' ಕಾರದಂತೆ ವ್ಯಕ್ತಿಯ ಅಂತರ್ಗತವಾದ ಅನಂತಸತ್ಯದ ಸಂಕೇತವಾಗಿ 'ತ' ಎಂಬುದನ್ನು ಜಪಿಸುತ್ತಾ ಧ್ಯಾನ ಮಾಡುತ್ತಾರೆ, ಭಾರತೀಯರಂತೆಯೇ ಚೀನಾದಲ್ಲೂ ಐದು ಪವಿತ್ರ ಪರ್ವತಗಳಿಗೆ ಯಾತ್ರೆ ಹೋಗುವ ರೂಢಿಯಿದೆ.

ಮಗುವು ಹುಟ್ಟಿದ ಹನ್ನೆರಡನೆಯ ದಿನ ಮೊದಲನೆಯ ವರ್ಷ 50-60 ಮತ್ತು 70 ನೆಯ ವರ್ಷದ ಹುಟ್ಟಿದ ಹಬ್ಬಗಳಲ್ಲಿ ಚೀನೀಯರು ಮನೆಯಲ್ಲಿರುವ ದೀರ್ಘಾಯುಷ್ಯದ ಅಭಿಮಾನಿ ದೇವತೆಯನ್ನು ಪೂಜಿಸಿ ಬಂಧುಮಿತ್ರರಿಗೆ ಸಿಹಿತಿಂಡಿ ಹಂಚಿ ಅವರ ಹಾರೈಕೆಗಳನ್ನು ಪಡೆಯುವರು. ಪಂಚಾಂಗಗಳಲ್ಲಿ ಗುರುತಿಸಿರುವ ದಿನಗಳಲ್ಲಿ ಹಬ್ಬ ಉತ್ಸವಗಳನ್ನು ನಡೆಸುವರು. ಇವುಗಳಿಂದ ಮನೋರಂಜನೆ ಸಾಮಾಜಿಕ ಸಾಂಸ್ಕೃತಿಕ ಸಂಘಟನೆ ದೊರೆಯುವುದು.

## ಉಗಾದಿ ಹಬ್ಬ

ಚಾಂದ್ರಮಾನದ ಉಗಾದಿ ಹಬ್ಬದಿಂದ ಚೀನೀಯರ ಹೊಸವರ್ಷವು ವಸಂತಋತುವಿಗೆ ಸ್ವಾಗತ ನೀಡುವ ಉತ್ಸವದಿಂದಲೂ ವ್ಯಾಪಾರ ವ್ಯವಹಾರಗಳನ್ನು ನಿಲ್ಲಿಸಿ ಮನರಂಜನೆಯ ಕಾರ್ಯಕಲಾಪಗಳಲ್ಲಿ ನಿರತವಾದ ಹಬ್ಬದಿಂದಲೂ ಆರಂಭವಾಗುತ್ತದೆ. ಕೃಷಿ ಐಶ್ವರ್ಯ, ಸಮೃದ್ಧಿಯ ದೇವತೆಗಳಿಗೆ ಪೂಜೆ ಮಾಡಲು ದೊಡ್ಡವರೂ ಚಿಕ್ಕವರೂ ಹೊಲಗದ್ದೆಗಳಲ್ಲಿ ಹಾಡುತ್ತಾ ಆ ದೇವತೆಗಳ ಉತ್ಸವ ನಡೆಸುತ್ತಾರೆ. ಮೆರವಣಿಗೆಯಲ್ಲಿ ಕಾಗದದ ಒಂದು ಹಸು ಮತ್ತು ಕರುವನ್ನು ಒಯ್ದು ಹಿಂತಿರುವಾಗ ಹಿಂದಿನ ವರ್ಷದ ಪ್ರತಿನಿಧಿಯಾದ ಹಸುವಿನ ಚಿತ್ರವನ್ನು ಉಳಿಸುತ್ತಾರೆ.

## ದೀಪಾವಳಿ

ವರ್ಷದ ಮೊದಲನೆಯ ತಿಂಗಳ ತ್ರಯೋದಶಿಯಿಂದ ಹುಣ್ಣಿಮೆಯವರೆಗೆ ಎಲ್ಲೆಲ್ಲೂ ದೀಪಗಳನ್ನು ಹಚ್ಚಿ ನೂರು ನೂರಿಪ್ಪತ್ತು ಬೊಂಬು ಮತ್ತು ಕಾಗದದಿಂದ ಮಾಡಿದ ವ್ಯಾಳವನ್ನು ಮೆರವಣಿಗೆಯಲ್ಲಿ ಹೊತ್ತು ಉತ್ಸವ ಮಾಡುತ್ತಾರೆ. ಆಗ ಪಟಾಕಿಗಳನ್ನು ಹತ್ತಿಸಿ ಜನರು ಆನಂದ ಪಡುತ್ತಾರೆ. 2000 ವರ್ಷಗಳಿಂದಲೂ ಚೀನಾದಲ್ಲಿ ಈ ಹಬ್ಬಗಳು ಆಚರಣೆಯಲ್ಲಿವೆ. ಎರಡನೆಯ ತಿಂಗಳ ಹನ್ನೆರಡನೆಯದಿನ ಹೆಂಗಸರೂ ಮಕ್ಕಳೂ ಬಣ್ಣಬಣ್ಣದ ಕಾಗದ ಮತ್ತು ರೇಷ್ಮೆಯ ಹೂಗಳಿಂದ ಮನೆಗಳನ್ನಲಂಕರಿಸಿ ಫಲಪುಷ್ಪಗಳು ಸಮೃದ್ಧಿಯಾಗಲೆಂದು ಪ್ರಾರ್ಥಿಸಿ ವಿಗ್ರಹಗಳಿಗೆ ವಂದಿಸುತ್ತಾರೆ. ಮೂರನೆಯ ತಿಂಗಳಿನ ಮೂರನೆಯದಿನ ಚೀನೀಯರು ತಮ್ಮ ಬಂಧುಗಳ ಸಮಾಧಿಗಳನ್ನು ಸಂದರ್ಶಿಸಿ ಗೌರವಿಸುತ್ತಾರೆ. ಐದನೆಯ ತಿಂಗಳ ಐದನೆಯ ದಿನ ಮಳೆ ನೀಡುವ ವ್ಯಾಳದ ತೃಪ್ತಿಗಾಗಿ ಅದರ ಆಕಾರದ ದೋಣಿಗಳನ್ನು ಜಾಗಟೆಗಳ ಶಬ್ದದೊಡನೆ ನದಿಗಳಲ್ಲಿ ನಡೆಸುತ್ತಾ ದೋಣಿಗಳ ಹಬ್ಬವಾಚರಿಸುತ್ತಾರೆ. ಗಾಳೀಪಟದ ಹಬ್ಬ ಒಂಬತ್ತನೆಯ ತಿಂಗಳ ಒಂಬತ್ತನೆಯ ದಿನ. ಹಿರಿಯರೂ ಕಿರಿಯರೂ ಎತ್ತರವಾದ ಜಾಗಗಳಿಂದ ಬಗೆಬಗೆಯ ಗಾಳೀಪಟಗಳನ್ನು ಹಾರಿಸಿ ನಲಿಯುತ್ತಾರೆ ಹೀಗೆಯೇ ಏಳನೆಯತಿಂಗಳ ಏಳನೆಯ ದಿನ ಹೆಣ್ಣುಮಕ್ಕಳು ಹೊಲಿಯುವ ಹಬ್ಬವನ್ನಾಚರಿಸುತ್ತಾರೆ. ಎಂಟನೆಯ ತಿಂಗಳ ಹುಣ್ಣಿಮೆಯದಿನ ಸ್ವರ್ಗ ಮತ್ತು ಭೂಮಾತೆ ಮತ್ತು ಪಿತೃಗಳ ಪೂಜೆ ಮತ್ತು ಪವಿತ್ರ ಪರ್ವತಗಳಲ್ಲಿರುವ ದೀಪಾಲಂಕೃತ ಪಗೋಡಗಳ ದರ್ಶನಕ್ಕಾಗಿ ಯಾತ್ರೆ ಮಾಡುವ ಪದ್ಧತಿಯಿದೆ. 1928 ರಲ್ಲಿ ರಚಿತವಾದ ರಾಷ್ಟ್ರೀಯಧ್ವಜದಲ್ಲಿನ ಕೆಂಪು ಬಾವುಟದ ಭೂಮಾತೆ ಮತ್ತು ಸೂರ್ಯನ ಚಿತ್ರವು ದಿವ್ಯ ಶಕ್ತಿಯ ಸಂಕೇತವಾಗಿವೆ.



## ಆಧಾರ ಗ್ರಂಥಗಳು :


ಹರ್ಬರ್ಟ್ ಎ. ಗಿಲ್ಸ್ – ರಿಲಿಜನ್ಸ್ ಆಫ್ ಏನ್ಸಿಯೆಂಟ್ ಚೈನಾ.

ಎಚ್. ಬಿ. ಮಾರ್ಗನ್ ಅಂಡ್ ಅಯೋನ್ ಪರ್ಕಿನ್ಸ್ — ಚೈನೀಸ್ ಸಿಂಬಲ್ಸ್ ಅಂಡ್ ಸೂಪರ್‌ಸ್ಟಿಷನ್ಸ್.

ಜಾನ್ ಬ್ಲೋಫೆಲ್ಡ್ – ಮಂತ್ರಾಸ್.

(15 ನೇ ಪುಟದಿಂದ)

'ಶ್ರವಣಮನಕಾನಂದವಿತ್ತು, ಭವಜನಿತ ದುಃಖಗಳನ್ನು ಕಳೆದು ಇಹಪರಂಗಳಲ್ಲಿ ಸುಖ ಸಾಧನೆಗೆ ನೆರವಾಗುವ ಲಕುಮಿಯಾಧವನ ಮಂಗಳ ಕಥೆ ಪ್ರಾಸಾದಿಕ ಕೃತಿ' - ಹರಿಕಥಾಮೃತಸಾರ ಇದನ್ನು ಓದಿದ ಕೇಳಿದ ಬರೆವ ಜೀವಕ್ಕೆ ಆರೋಗ್ಯ-ಭಾಗ್ಯ-ಆನಂದ ಆಗುವುದರಲ್ಲಿ ಸಂದೇಹವಿಲ್ಲ. ಸಿದ್ಧಾಂತವು ಸಾಹಿತ್ಯದ ಮೂಲಕ ತಿಳಿ ಹೊನಲಾಗಿ ಹರಿದು ಬಂದಿರುವುದರಿಂದ 'ಇದು ಓದಲು ಕೇಳಲು ಸುಭಗವಾಗಿ, ಸುಶ್ರಾವ್ಯವಾಗಿ, ಶಿಷ್ಟವಾಗಿ, ರಸವತ್ತಾಗಿರುತ್ತದೆ'-ಎಂದೆಲ್ಲಾ ಅನೇಕರು ಅನುಭವದಿಂದ ಕಂಡುಂಡ ಸತ್ಯವನ್ನು ಸಾರಿ ಹೇಳಿದ್ದಾರೆ. ಗ್ರಂಥಕರ್ತರು ತಮ್ಮ ಸಾಕ್ಷಾತ್ ಶಿಷ್ಯರಿಗೆ ಹೇಳಿ ಫಲಸ್ತುತಿ ಬರೆಸಿದ್ದರೂ, ಕೃತಿಕಾರರೇ ಅಲ್ಲಲ್ಲಿ ಫಲಸ್ತುತಿ ರೂಪವಾದ ಪದ್ಯಗಳನ್ನೂ, ಕೀರ್ತನೆಗಳನ್ನು ಬರೆದಿದ್ದರೂ, ಇತರರೂ ಈ ಗ್ರಂಥವನ್ನು ಮೆಚ್ಚಿಕೊಂಡು ಪ್ರಶಂಸಾತ್ಮಕವಾದ ಮಹಿಮಾದ್ಯೋತಕವಾದ ಫಲಸ್ತುತಿರೂಪವಾದ, ಅನೇಕ ಪದ್ಯಗಳನ್ನೂ ಪದಗಳನ್ನೂ ರಚಿಸಿದ್ದಾರೆ.

'ಮಲಗಿ ಪರಮಾದರದಿ ಪಾಡಲು ಕುಳಿತು ಕೇಳುವ; ಕಣ್ಣಿಗೆವೆಯಂದದಲಿ ಕೈ ಮೈ ತಿಣ್ಣಿಗೊದಗುವ ತೆರದಿ; ಸರ್ವದೇಶವು ಪುಣ್ಯದೇಶವು, ಮಕ್ಕಳಾಡಿಸುವಾಗ; ಆಸೆಗೊಳಗಾದವನು ಜನರಿಗೆ ದಾಸನೆನಿಸುವ, ಜಾಲಿತೊಪ್ಪಲ ಜಾವಿಗಳು ಮೆದ್ದು ಆಲಯದಿ ಪಾಲ ಕರೆವಂದದಲಿ; ಸ್ಮರಿಸುವರಪರಾಧಗಳ ತಾ ಸ್ಮರಿಸ, ಶ್ರವಣಮನಕಾನಂದವೀವುದು; ಕಬ್ಬಿನೊಳಗಿಹ ರಸವಿದಂತನಿಗಬ್ಬಬಲ್ಲುದೆ; ಲೋಕವಾರ್ತೆಯಿದಲ್ಲ; ಒಬ್ಬನಲ್ಲಿ ನಿಂತಾಡುವನು, ಎಲ್ಲರೊಳು ತಾನಿಪ್ಪ; ಆವ ಕಾಲದವನಾದೊಡೇನು; ಬಾಲಕನ ಕಲಭಾಷೆ; ಕ್ಷೋಣೀಪತಿ ಸುತನೆನಿಸಿ; ಝಲ್ಲಡಿಯ ನೆಳಲಂತೆ!' ಮೊದಲಾದ ಹರಿಕಥಾಮೃತಸಾರರ ಅನೇಕ ಪದ್ಯಗಳು ರಸವತ್ತಾಗಿ ಆಕರ್ಷಕವಾಗಿ ಹೃದಯಸ್ಪರ್ಶಿಯಾಗಿ ಕೇಳುಗರನ್ನು ಆಕರ್ಷಿಸಿ ಆನಂದ ತುಂದಿಲರನ್ನಾಗಿ ಮಾಡುವಂತಹುದಾಗಿವೆ. ಸರಳತೆ, ಹೃದ್ಯತೆ, ಗಹನತೆ, ವಿಶಾಲದೃಷ್ಟಿ, ವಿವೇಚನೆಯ ಸೊಗಸು, ಉಪಮಾರಂಜಕತೆ ಸಾಹಿತ್ಯಸತ್ವ, ಭಕ್ತಿಭರಿತವಾಗಿರುವುದೇ ಈ ಉತ್ತಮ ಫಲಕ್ಕೆ ಕಾರಣ.

ಜಗನ್ನಾಥದಾಸರ ಕೀರ್ತನೆಗಳು ಅನೇಕ. ಅವರ ಹಿಂದಿನ ಜ್ಞಾನಿಗಳ ಉದಾತ್ತ-ಉದಾರ ಚರಿತರ ಮಹಿಮಾದ್ಯೋತಕವಾಗಿದೆ – ಶ್ರೀಹರಿಯ ಗುಣಗಾನರೂಪವಾಗಿವೆ; ಆತ್ಮಚರಿತ್ರಾತ್ಮಕವಾಗಿಯೂ ಇವೆ; ತೀರ್ಥಕ್ಷೇತ್ರಗಳ ವರ್ಣನಾತ್ಮಕವಾಗಿಯೂ ದೇವತಾ ಚಾರಿತ್ರ್ಯ ವರ್ಣನೆ ಬೋಧನಾತ್ಮಕವಾಗಿಯೂ ಇವೆ. ಬದುಕಿನ ಫಲ, ಸ್ತ್ರೀಯರ ಕರ್ತವ್ಯ, ನೀಚರ ಲಕ್ಷಣ, ಜ್ಞಾನಿಗಳ–ಸಂತರ ಲಕ್ಷಣಗಳು, ದುರ್ಗುಣಗಳ ಹೇಳನ, ಸ್ವಾನಂದಾನುಭವ, ಸೂಕ್ಷ್ಮಧರ್ಮಸಿಂಧಕರ ಸ್ಥಾನ, ಅವರಿಂದ ಸಜ್ಜನರಿಗಾಗುವ ಲಾಭ ಮುಂತಾದ ವಿಷಯಗಳನ್ನೊಳಗೊಂಡಿವೆ.

'ಕರುಣಿಸೆನಗಿನಿತು ಕರುಣಾರ್ಣವನೆ', 'ರಂಗ ನಿನ್ನ ಕೊಂಡಾಡುವ ಮಂಗಳಾತ್ಮರ', 'ಶ್ರೀ ವೆಂಕಟ ಶೈಲಾಧಿಪ ನಮೋ', 'ಫಲಿಸಿದು ಬಾಳ್ದುದಕೆ', 'ವ್ಯರ್ಥ ಕಳೆವರೇನೋ ಕಾಲವ', 'ಶ್ರೀ ವೆಂಕಟಾಚಲನಿವಾಸ', 'ಆರಿತವರಿಗತಿ ಸುಲಭ ಹರಿಯ ಪೂಜೆ', 'ಮನವೇ ಮರೆಯದಿರು ಹರಿಯ', 'ನಮೋ ನಮೋ ಶ್ರೀ ರಾಘವೇಂದ್ರ', 'ಶ್ರೀನಿಕೇತನ ಪಾಲಯಮಾಂ', ಮುಂತಾದ ಅವರ ಕೃತಿಗಳು ಲೋಕ ಪ್ರಸಿದ್ಧವಾಗಿವೆ. ಅವರ ಸಂಸ್ಕೃತ ಸಿದ್ಧಾಂತ ಪಾಂಡಿತ್ಯ ಭಕ್ತಿ ಜ್ಞಾನಗಳ ಆಳವನ್ನು ಈ ಕೃತಿಗಳಲ್ಲಿ ಮನಗಾಣಬಹುದು.

ಜಗನ್ನಾಥದಾಸರ ತತ್ತ್ವಸುವ್ವಾಲಿಗಳು ಬಂದು ಪ್ರತ್ಯೇಕ ಗುಂಪಿಗೇ ಸೇರಿದಂತಹವು. ಮನೆ ತಪ್ಪಿ ಬಂದ ಮಗಳ ತಪ್ತ ಹೃದಯಕ್ಕೆ ತಂಪನ್ನು ನೀಡಿ ಬಾಳು ಸಹ್ಯವಾಗಲು ರಚಿತವಾದ ಈ ಸರಳ ಸುಂದರ ಜ್ಞಾನನಿಧಿ ತ್ರಿಪದಿಗಳು ಹೃದಯದಿಂದ ಬಂದುವಾದುದರಿಂದ ಹೃದಯಕ್ಕೆ ನೇರವಾಗಿ ಹೋಗಿ ಮುಟ್ಟಿ ಎಬ್ಬಿಸಿ ಅದನ್ನು ಹಸನು ಮಾಡುವಂತಹುವು. ಅವರು ಎಷ್ಟೋ ಸಂಖ್ಯೆಯ ಸುವ್ವಾಲಿಗಳನ್ನು ರಚಿಸಿದ್ದರೂ ಈಗ ನಮಗೆ ದೊರೆತಿರುವುದು ನಾಲ್ಕು ನೂರ

ಎಂಟು ಮಾತ್ರ. ಸುವ್ವಾಲಿಗಳಲ್ಲಿನ ಲಯ ತಾಳ ಗೇಯತೆಗಳು ತುಂಬ ಮನೋಹರವಾಗಿದ್ದು ಅಧ್ಯಾತ್ಮ ಹೃದಯ ಗೀತೆಗಳಾಗಿವೆ.

ಈ ತತ್ತ್ವಸುವ್ವಾಲಿಗಳಲ್ಲಿಯೂ ವಿಷಯ ವೈವಿಧ್ಯವಿದೆ. ರುಕ್ಮಿಣೀ. ಶ್ರೀಕೃಷ್ಣ ಶ್ರೀನಿವಾಸ ಚರಿತ್ರೆಗಳು, ಕಥಾನಕಗಳು ಇಲ್ಲಿ ಸ್ವಾರಸ್ಯವಾಗಿ ಬಂದಿವೆ. ವಿನಾಯಕ, ನವಗ್ರಹಗಳು, ರುದ್ರ, ವಾಯು, ಬ್ರಹ್ಮ, ಭೂ, ದುರ್ಗ, ತುಳಸಿ, ಮೊದಲಾದವರನ್ನು ಕುರಿತ ಸ್ತುತಿಗಳಿಂದ ಕೂಡಿದ ಸುವ್ವಾಲಿಗಳು ಪ್ರಾರ್ಥನಾ ಪದ್ಯಗಳಾಗಿವೆ. ಪಾಂಡಿತ್ಯದ ಅಬ್ಬರ ವಿದ್ವತ್ತಿನ ಕಸರತ್ತು, ಪ್ರೌಢ ಶಬ್ದಾಡಂಬರ, ಶ್ಲೇಷೆಯ ಕ್ಲಿಷ್ಟತೆ, ಶಾಸ್ತ್ರ ಜಟಿಲತೆಗಳಿಲ್ಲದೆ ಸರಳ ಸುಂದರ ನೇರ ಭಕ್ತಿಪೂರ್ಣವಾದ ಈ ತ್ರಿಪದಿಗಳು ಕೃತಿಕಾರರ ಅನುಭವ ವೈಶಾಲ್ಯ, ಆಳವಾದ ಜ್ಞಾನ, ಭಕ್ತಿ - ವೈರಾಗ್ಯಗಳ ಕುರುಹುಗಳಾಗಿದ್ದು ಅವುಗಳ ಸಾರ ಸವಿಯನ್ನು ಮೈದುಂಬಿಕೊಂಡು ಹೊರಹೊಮ್ಮಿವೆ.

ಜ್ಞಾನವೇ ಸದ್ಗುಣ; ಅಜ್ಞಾನವೇ ತಮ' ಎಂಬ ಪ್ರಪಂಚ ಪ್ರಸಿದ್ಧವಾದ ಹೇಳಿಕೆ ಜಗನ್ನಾಥದಾಸರ ಒಂದು ತತ್ತ್ವ ಸುವ್ವಾಲಿಯಲ್ಲಿ ಹೀಗೆ ಮೂಡಿದೆ.

'ತಿಳಿಯದುದೇ ಪಾಪ - ತಿಳಿಯುವುದೇ ಪುಣ್ಯ'. "ಜ್ಞಾನೇನೈವ ಪರಂ ಪದಂ ಅಜ್ಞಾನೇನ ಚ ತಮೋ" ಎಂಬುದು ಶ್ರೀ ಮಧ್ವಾಚಾರ್ಯರ ಸದ್ವಾಣಿ. ಸಾವಿರಾರು ವರ್ಷಗಳ ಹಿಂದೆ ಇದ್ದ ಗ್ರೀಸ್ ದೇಶದ ಪ್ರಸಿದ್ಧ ವಿದ್ವಾಂಸ ಸಾಕ್ರಟೀಸ್ ಹೀಗೆ ಹೇಳಿದ್ದಾನೆ- knowledge is virtue, Ignorance is Vice ಎಂದು.

ಕರುಣೆಯಿಂದ ಎಲ್ಲವನ್ನು ಕೊಡುವ ಶ್ರೀಹರಿ ಇರುವಾಗ ಅಯೋಗ್ಯರಾದ ಮನುಷ್ಯರನ್ನೂ ಯಾಕೆ ದೈನ್ಯದಿಂದ ಬೇಡಿ ಬಳಲುವಿರಿ ಎನ್ನುತ್ತಾರೆ. ಒಂದು ಸುವ್ವಾಲಿಯಲ್ಲಿ-

ಅಶನ ವಸನಗಳೀವ ವಸುದೇವ ಸುತ-
ನಿರಲು
ಹುಸಿಯಾಡಿ ಬದುಕೋ ನರರಿಗೆ |
ನರರಿಗಾಲ್ಪರಿದರೆ
ಹಸಿವೆ ಅಡಗುವುದೆ ಎಲೆ ಜೀವ ||
ಎನಗೆ ದಾತನು ನೀನು ನಿನಗೆ ದೂತನು
ನಾನು
ಇನಿತಿದ್ದ ಬಳಿಕ ಅಧಮರ |
ಅಧಮ ಮಾನವರನ್ನು
ಅನುಸರಿಸಲ್ಯಾಕೋ ನಾನಿನ್ನು ||

ಹೀಗೆ ನೂರಾರು ಸುವಾಲಿಗಳಲ್ಲಿ ಜಗನ್ನಾಥದಾಸರು ನೀಡಿರುವ ತಮ್ಮ ಅನುಭವ ಅರಿವುಗಳ ಸಾರವನ್ನು ಸವಿದು ಮೈಮರೆಸುವ ಭಕ್ತಿಯನ್ನು ಬೆಳೆಸಿಕೊಳ್ಳಬಹುದಾಗಿದೆ. ಹೃದಯವನ್ನು ಹದ ಮಾಡಿ ಶುದ್ಧಿ ಮಾಡಿ ನೆಮ್ಮದಿಯನ್ನು ನೀಡುವ ಶಕ್ತಿ ಈ ಕೃತಿಗಳಲ್ಲಿ ತುಂಬಿದೆ.

ಸುವ್ವಾಲಿಗಳೇನೂ ಹೀಗೆ ಸರಳವಾಗಿ ಬಂದಿದ್ದರೂ ಜಗನ್ನಾಥದಾಸರ ಶೈಲಿಯ ಮುಖ್ಯ ಗುಣ ಸರಳತೆಯೇನಲ್ಲ. ಅದು ರಾಜಶೈಲಿ – ಗಂಡುಶೈಲಿ, ಸಾಲಂಕೃತ ವಿದ್ವತ್‌ಶೈಲಿ. ಹರಿದಾಸ ಸಾಹಿತ್ಯದಲ್ಲೇ ಅದಕ್ಕೆ ವಿಶಿಷ್ಟವಾದ ಸ್ಥಾನವುಂಟು. ಅವರ ಶೈಲಿಯ ಬಿಗಿ, ಬನಿ, ಬಂಧ, ವಿದ್ವತ್ತು ಜಪ, ಜ್ಞಾನ, ಶಕ್ತಿ, ಓಜಸ್ಸು, ಶಬ್ದ, ಸರಿಯೋಜನಾ ಕೌಶಲ್ಯಗಳು ಬೆರಗುಗೊಳಿಸುವಂತಹವು.

ಕನ್ನಡ ಹರಿದಾಸ ಸಾಹಿತ್ಯದ ಎರಡನೆಯ ಘಟ್ಟದಲ್ಲಿ ಅದನ್ನು ಉಜ್ವಲವಾಗಿ ಬೆಳೆಸಿದವರಲ್ಲಿ ಜಗನ್ನಾಥದಾಸರದು ವಿಶಿಷ್ಟವಾದ ಪಾತ್ರ.

ಜಗನ್ನಾಥದಾಸರ ಜೀವನ ಚರಿತ್ರೆ ಪವಾಡಪೂರ್ಣ; ಕೃತಿಗಳು ವಿದ್ವತ್ಪೂರ್ಣ, ವ್ಯಕ್ತಿತ್ವ ವೈಭವಪೂರ್ಣ. ಷಡ್ದರ್ಶನ ವಿಶಾರದರೆನಿಸಿ ಅಂದಿನ ಪುಣೆಯ ಪೇಷ್ವೆಗಳ ಮೈಸೂರಿನ ಮಹಾಮಂತ್ರಿ ಪೂರ್ಣಯ್ಯನವರ, ಗದ್ವಾಲ ಸುರಪುರ ಸವಣೂರುಗಳ ಅರಸರ, ವಿದ್ವತ್ ಸಭೆಯಲ್ಲಿ ವಿರಾಜಮಾನರಾಗಿ ಬೆಳಗಿದ ರಾಜ ಮನ್ನಣೆಯನ್ನು ಪಡೆದ ಪಂಡಿತ ಪ್ರಕಾಂಡರು, ಶಾಪಾನುಗ್ರಹ ಶಕ್ತಿಯುಳ್ಳ ಜ್ಞಾನಿವರೇಣ್ಯರು, ಆದರ್ಶ ಭಗವದ್ಭಕ್ತರು ಎಂದು ಪ್ರಸಿದ್ಧರಾದವರು.

ಇಂತಹ ದೇವತಾಂಶ ಸಂಭೂತರೆನಿಸಿದ ಶ್ರೀ ಜಗನ್ನಾಥದಾಸರ ಸ್ಮರಣೆ- ಅವರ ಕೃತಿಗಳ ಶ್ರವಣ ಮನನಗಳು ಪುಣ್ಯದಾಯಕ ಜ್ಞಾನದಾಯಕ ಭಕ್ತಿ ಉದ್ಬೋಧಕವಾಗಿವೆ.



## ಹರಿಯ ವೈಭವ

ವೈಭವ ನೋಡಿರೇ ಸಖಿಯರೆ
ತಿರುಮಲಾಧಿಪ ಮೆರೆದು ಬರುವ ...
ಎಡಬಲದಲಿ ತನ್ನ ಮಡದಿಯರೊಡ
ಗೊಂಡು
ಸಡಗರದಲಿ ಪೊಡವೀಶ ಬರುವ ...
ಗರುಡ ವಾಹನವೇರಿ ಸರಸ ಸಂಭ್ರಮ
ದಿಂದ
ವರವನೀಯುತ ಹರಿ ಮೊರೆದು ಬರುವ ...
ಹಾರ–ಪುಷ್ಪ ಆಭರಣ ಭೂಷಿತನಾಗಿ
ಧಾರುಣಿ ಪತಿ ದಯದಿಂದ ಬರುವ
ಪಂಜು ಹಿಲಾಲ್ಗಳ ಪುಂಜದೊಳಗೆ ತೇಜಃ
ಪುಂಜನಾಗಿ ದೇವ ರಂಜಿಸುತಿಹ ...
ಸಾಧು ಜನರ ಸಂದಣಿಯೊಳು ಮಾಧವ
ಕಾದ ಭಕ್ತರ ಮನ ಮೋದಬಡಿಪ ...
ಮೂಢ ಜನರ ಮೂಢ ಮತಿಯ
ನೋಡಿಸುತ
ಗಾಡಿಕಾರ ಸ್ವಾಮಿ ಓಡಿ ಬರುವ ...
ಸಾರಿ ನಮಿಪರಘ ತರಿಯದೆಬಿಡೆನೆಂದು
ತೋರ ಹಸ್ತದಿ ನರಹರಿಯು ಬರುವ ...

**ಗುರುರಾಜ ಬೆಣಕಲ್.**

# ಹಿಂದೂ ಧರ್ಮದಲ್ಲಿ ಚಂದ್ರ

ನಿರಂತರವಾಗಿ ಪರಿವರ್ತನಶೀಲವಾದ ಈ ಜಗತ್ತಿನಲ್ಲಿ ಮಾನವನು ತನ್ನ ಸಂಸ್ಕೃತಿಗೆ ಅನುಗುಣವಾಗಿ ವಿಕಾಸಪರವಾದ ಮಾರ್ಗವನ್ನು ಅವಲಂಬಿಸಿ ತನ್ನ ಜೀವನದಲ್ಲಿ ಅಭ್ಯುದಯವನ್ನು ಕಾಣಲು ಹಂಬಲಿಸುತ್ತಿರುವ ಚಿತ್ರವನ್ನು ಇತಿಹಾಸದ ಮೂಲಕ ಪ್ರಾಚೀನ ಕಾಲದಿಂದಲೂ ಕಾಣುತ್ತೇವೆ. ಈ ಮಾನವ ಜೀವನದ ಏಳಿಗೆಗೆ ಹಿನ್ನೆಲೆಯಾಗಿ ನಾವು ವಿವಿಧ ಧರ್ಮಗಳ ಅನುಕರಣೆಯ ಆಧಾರವನ್ನೂ ಕಾಣುತ್ತೇವೆ. ಇಂತಹ ಧರ್ಮಗಳು ಜಗತ್ತಿನಲ್ಲಿ ಆಯಾ ಮನುಷ್ಯಸಂಗಡದ ಬೌದ್ಧಿಕ ಹಾಗು ಆಧ್ಯಾತ್ಮಿಕ ಸ್ವಭಾವದಿಂದ ಉದ್ಭವಿಸಿದವು. ಜಗತ್ತಿನಲ್ಲಿ ವ್ಯಾಪ್ತಗೊಂಡ ಧರ್ಮಗಳಲ್ಲಿ ಹಿಂದೂ ಧರ್ಮವು ಮಾನವ ಜೀವನದಲ್ಲಿ ಸುಖವನ್ನು ಸಾಧಿಸಿ ಕೊಡುವುದರಲ್ಲಿ ಸರ್ವತೋಮುಖವಾದ ಸಮುಖತೆಯನ್ನು ತೋರಿಸಿದೆಯೆಂದು ಹೇಳಬಹುದು. ಹಿಂದೂ ಧರ್ಮದಲ್ಲಿ ಆಯಾ ಸಂಗಡದ ಜನರು ಪ್ರಾಮುಖ್ಯವಾಗಿ ವಿಷ್ಣು ಅಥವಾ ಶಿವನನ್ನು ಪೂಜಿಸುತ್ತಿದ್ದರೂ, ಅದಕ್ಕಂಗವಾಗಿ ಇತರ ದೇವತೆಗಳನ್ನು ಇಷ್ಟದೇವತಾಭಾವದಿಂದ ಪೂಜಿಸುವುದು ರೂಢಿಯಲ್ಲಿ ಬಂದಿದೆ. ಹೀಗೆ ಇಷ್ಟದೇವತೆಯಾಗಿ ಚಂದ್ರನು ಸನಾತನ ಧರ್ಮವಾದ ಹಿಂದೂ ಧರ್ಮದಲ್ಲಿ ಎಂತಹ ಪಾತ್ರವನ್ನು ವಹಿಸಿದ್ದಾನೆಂಬುದು ಗಮನಾರ್ಹ.

ಚಂದ್ರನು ಗ್ರಹವೂ ದೇವತೆಯೂ ಆಗಿದ್ದು ವಿವಿಧ ಪರಿಸರಗಳಲ್ಲಿ ತನ್ನ ಪ್ರಭಾವವನ್ನು ಬೀರಿದ್ದಾನೆ. ಚಂದ್ರನು ವಿಷ್ಣು ಪರಮಾತ್ಮನ ಮನಸ್ಸಿನಿಂದ ಹುಟ್ಟಿದನು ಎಂದು 'ಚಂದ್ರಮಾ ಮನಸೋ ಜಾತಃ' ಎಂಬ ಋಗ್ವೇದ ವಾಕ್ಯದಿಂದ ತಿಳಿದು ಬರುವುದು. ಈ ಮನೋಜಾತನಾದ ಚಂದ್ರನು ಮನೋರೋಗಿಗಳ ಮೇಲೆ ವಿಶಿಷ್ಟವಾದ ಪರಿಣಾಮವನ್ನು ಬೀರುತ್ತಾನೆಂದು ಆಯುರ್ವೇದ ಶಾಸ್ತ್ರದಲ್ಲಿ ಹೇಳಿದೆ. ಇಷ್ಟೇ ಏಕೆ, ಆಯುರ್ವೇದ ಔಷಧಿಗಳಲ್ಲಿ ಒಂದಾದ ಚಂದ್ರಪುಟಿ ಎಂಬ ಭಸ್ಮವನ್ನು ತಯಾರಿಸಬೇಕಾದರೆ ಪೂರ್ಣಿಮೆಯ ಬೆಳದಿಂಗಳು ಅತ್ಯವಶ್ಯ. ಚಂದ್ರನ ಕಿರಣಗಳ ಶೀತವೀರ್ಯವು ಆ ಭಸ್ಮದಲ್ಲಿ ಬಂದು ಉಷ್ಣ ಪ್ರಕೃತಿಯುಳ್ಳ ರೋಗಿಯ ಮೇಲೆ ವಿಶೇಷ ಪರಿಣಾಮವನ್ನು ಬೀರುವುದು.

ಇಂಥ ಚಂದ್ರನು ಪುರಾಣಾಂತರಗಳಲ್ಲಿ— ದೇವಾಸುರರು ಸೇರಿ ಕ್ಷೀರಾಬ್ಧಿ ಮಥನ. ಮಾಡುತ್ತಿರುವಾಗ ಉದ್ಭವಿಸಿದ ಅಮೂಲ್ಯ ವಸ್ತುಗಳಲ್ಲಿ ಒಬ್ಬನು ಎಂದು ತಿಳಿದುಬರುವುದು. ಇದಲ್ಲದೇ, ಬ್ರಹ್ಮನಿಂದ ಸೃಷ್ಟಿ ಕಾರ್ಯದಲ್ಲಿ ನಿಯಮಿತನಾಗಿದ್ದ ಅತ್ರಿಮಹರ್ಷಿಯು ತಪಸ್ಸು ಮಾಡುತ್ತಿದ್ದಾಗ ಈತನ ಕಣ್ಣಿನಿಂದ ದಿವ್ಯಜ್ಯೋತಿಯೊಂದು ಹೊರಟು ಹತ್ತು ದಿಕ್ಕುಗಳಲ್ಲಿಯೂ ಹರಡಿತು. ದಿಕ್ಕುಗಳು ಅದನ್ನು ಧರಿಸಲು ಸಾಧ್ಯವಾಗದೇ ಭೂಮಿಯಲ್ಲಿ ಬಿಡಲಾಗಿ ಬ್ರಹ್ಮನು ಅದನ್ನು ಒಟ್ಟುಗೂಡಿಸಿ ಒಬ್ಬ ಪುರುಷನನ್ನಾಗಿ ಮಾಡಿ ಚಂದ್ರನೆಂದು ನಾಮಕರಣಮಾಡಿ ಗ್ರಹಗಳ ಮಂಡಲದಲ್ಲಿ ಸೇರಿಸಿದನೆಂದು ಸೂರ್ಯ ಸಿದ್ಧಾಂತದಲ್ಲಿ ಹೇಳಿದೆ.

ಚಂದ್ರನು ದಕ್ಷಪುತ್ರಿಯರಾದ ಅಶ್ವಿನಿ ಮೊದಲಾದ ಇಪ್ಪತ್ತೇಳು ಕನ್ನಿಕೆಯರನ್ನು ಮದುವೆಯಾದನು. ರೋಹಿಣಿಯನ್ನು ಮಾತ್ರ ಚಂದ್ರನು ವಿಶೇಷವಾಗಿ ಪ್ರೀತಿಸುತ್ತಿದ್ದನು. ಕಾರಣ ದಕ್ಷನು ಚಂದ್ರನಿಗೆ ಕ್ಷಯರೋಗ ಬರುವಂತೆ ಶಾಪವಿತ್ತನು. ಬಳಿಕ ತನ್ನ ಮಕ್ಕಳ ಪ್ರಾರ್ಥನೆಯಂತೆ ದಕ್ಷನು, ತಿಂಗಳಿನ ಒಂದು ಪಕ್ಷದಲ್ಲಿ ಕ್ಷಯವನ್ನು ಹೊಂದುವಂತೆಯೂ, ಇನ್ನೊಂದು ಪಕ್ಷದಲ್ಲಿ ಕ್ರಮೇಣ ವೃದ್ಧಿಯನ್ನೂ ಹೊಂದುವಂತೆಯೂ ವರವನ್ನು ದಯಪಾಲಿಸಿದನೆಂದು ಪದ್ಮಪುರಾಣದಲ್ಲಿ ಹೇಳಿದೆ.

ಇದಕ್ಕನುಗುಣವಾಗಿ, ಕೃಷ್ಣಪಕ್ಷದ ಪ್ರತಿಪದೆಯಿಂದ ಆರಂಭಿಸಿ ಹದಿನೈದು ದಿನಗಳಲ್ಲಿ ಅಗ್ನಿ ಮೊದಲಾದ 15 ದೇವತೆಗಳು ಅಮೃತಪಾನ ಮಾಡುವುದರಿಂದ ಚಂದ್ರನ ಕಲೆಗಳು ಕ್ರಮೇಣ ಕಡಿಮೆಯಾಗುತ್ತ ಬಂದು, ಪುನಃ ಪಕ್ಷಾಂತ್ಯದಲ್ಲಿ ಯಾಗಗಳಲ್ಲಿ ಅರ್ಪಿತವಾದ ಹವಿಸ್ಸುಗಳು ಅಮೃತರೂಪದಿಂದ ಕ್ರಮೇಣ ಕಲೆಗಳಾಗಿ ಚಂದ್ರನನ್ನು ಸೇರುವವು. ಹೀಗೆ ಅಮಾವಾಸ್ಯೆಯವರೆಗೂ ಕಲೆಗಳ ಕ್ಷಯಹೊಂದಿ, ಪುನಃ ಪೂರ್ಣಿಮೆಯ ವೇಳೆಗೆ 16 ಕಲೆಗಳಿಂದ ಚಂದ್ರಬಿಂಬವು ಪೂರ್ಣವಾಗಿ ಶೋಭಿಸುವುದು.

ಚಂದ್ರನು ಒಂದು ಸಲ ಅವಿಮುಕ್ತ ಕ್ಷೇತ್ರದಲ್ಲಿ ಪರಮೇಶ್ವರನನ್ನು ಕುರಿತು ಘೋರತಪಸ್ಸನ್ನು ಮಾಡಿ, ಅವನನ್ನು ಮೆಚ್ಚಿಸಿ ಶಿವನ ತಲೆಯ ಮೇಲೆ ಸ್ಥಾನವನ್ನು ಪಡೆದನು. ಈ ಕಾಲಕ್ಕೆ ಚಂದ್ರನು ರಾಜಸೂಯ ಯಾಗವನ್ನು ಮಾಡಿ, ಬ್ರಾಹ್ಮಣರನ್ನು ಸಂತೋಷಪಡಿಸಿ 'ದ್ವಿಜರಾಜ'ನೆಂಬ ಬಿರುದಾಂಕಿತನಾದನು

ಎಂಥ ಕೀರ್ತಿಶಾಲಿಯೂ, ಪ್ರೀತ್ಯಾಸ್ಪದನೂ, ಸಜ್ಜನನೂ ಆದ ಮನುಷ್ಯನೂ ವಿಧಿಯ ಒತ್ತಾಯದಿಂದ ಜನರ ಅಪವಾದಕ್ಕೆ ಗುರಿಯಾಗುವುದನ್ನು ನಾವು ಇವತ್ತಿನ ಸಮಾಜದಲ್ಲಿ ನೋಡುತ್ತೇವೆ. ಅದರಂತೆ, ಚಂದ್ರನೂ ಒಮ್ಮೆ ವಿಧಿವಶನಾಗಿ ತನ್ನ ಗುರುಗಳಾದ ಬೃಹಸ್ಪತಿಯ ಪತ್ನಿ—ತಾರಾಳಲ್ಲಿ ಮೋಹವುಳ್ಳವನಾದನು. ಚಂದ್ರನ ಪ್ರೇಮಜಾಲದಲ್ಲಿ ಸಿಕ್ಕಿದ ತಾರಾಳನ್ನು ಹಿಂತಿರುಗಿಸಲು ಬೃಹಸ್ಪತಿಯು ಪ್ರಯತ್ನಿಸಿ ವಿಫಲನಾದನು. ನಂತರ ಬೃಹಸ್ಪತಿಯು

ದೇವತೆಗಳ ಸಹಾಯದಿಂದ ಚಂದ್ರನ ವಿರುದ್ಧ ಯುದ್ಧವನ್ನು ಕೈಗೊಂಡನು. ದೈತ್ಯಗುರುವಾದ ಶುಕ್ರಾಚಾರ್ಯರ ನೆರವು ಚಂದ್ರನಿಗೆ ಇದ್ದುದರಿಂದ, ಚಂದ್ರನೂ ಎದೆಗುಂದಲಿಲ್ಲ. ಕೊನೆಗೆ ಬ್ರಹ್ಮನು ಈ ಪರಿಸ್ಥಿತಿಯನ್ನು ಅವಲೋಕಿಸಿ. ಚಂದ್ರ ಮತ್ತು ತಾರಾಳಿಗೆ ಬುದ್ಧಿವಾದವನ್ನು ಹೇಳಿ, ತಾರಾಳನ್ನು ಹಿಂತಿರುಗಿಸಿದನು. ಹೀಗೆ ಚಂದ್ರನು ಗುರುಪತ್ನಿಯ ಸ್ಪರ್ಶಕಳಂಕವುಳ್ಳವನಾದನೆಂದು ದೇವಿಭಾಗವತದಲ್ಲಿ ಹೇಳಿದೆ.

ದೇವಾಸುರರು ಕ್ಷೀರಸಮುದ್ರಮಥನ ಮಾಡುತ್ತಿರುವಾಗ ಧನ್ವಂತರಿನಾಮಕ ಪರಮಾತ್ಮನಿಂದ ಸಹಿತವಾದ ಅಮೃತಕಲಶವು ಆವಿರ್ಭೂತವಾಯಿತು. ಆದರೆ ಸೈಂಹಿಕೇಯ ಎಂಬ ಮಾಯಾವಿ ಅಸುರನು ಈ ಅಮೃತಕಲಶವನ್ನು ತೆಗೆದುಕೊಂಡು ಪಾತಾಳಲೋಕಕ್ಕೆ ಹೋದನು. ಮಹಾವಿಷ್ಣುವು ಮೋಹಿನಿರೂಪವನ್ನು ಧರಿಸಿ ಆ ಅಮೃತ ಕಲಶವನ್ನು ತಿರುಗಿ ಪಡೆದು ದೇವತೆಗಳಿಗೆ ಅಮೃತಪಾನ ಮಾಡಿಸುತ್ತಿದ್ದನು. ಈ ಕಾಲಕ್ಕೆ ಮಾಯಾವಿಯಾದ ಆ ಅಸುರನು ಮುದುಕ ಬ್ರಾಹ್ಮಣ ವೇಷಧರಿಸಿ ಸ್ವರ್ಗವನ್ನು ಪ್ರವೇಶಿಸಿ ಅಮೃತಪಾನಮಾಡಲು ಆರಂಭಿಸಿದನು. ದ್ವಾರಪಾಲಕರಾದ ಸೂರ್ಯ–ಚಂದ್ರರು ಈ ಗುಪ್ತ ವಿಷಯವನ್ನು ವಿಷ್ಣುವಿಗೆ ತಿಳಿಸಿದರು. ವಿಷ್ಣುವು ತನ್ನ ಸುದರ್ಶನ ಚಕ್ರದಿಂದ ಸೈಂಹಿಕೇಯನ ಶಿರಚ್ಛೇದನ ಮಾಡಿದನು, ಈ ಮೊದಲೇ ಅಮೃತಪಾನ ಮಾಡಿದ್ದರಿಂದ ಅಸುರನ ರುಂಡ-ಮುಂಡಗಳೇ ರಾಹು-ಕೇತುಗಳಾಗಿ ಪರಿಣಮಿಸಿ, ನಂತರ ಸಚೇತನಗಳಾದವು. ಸೂರ್ಯ–ಚಂದ್ರರಿಂದ ತನ್ನ ಗುಟ್ಟು ರಟ್ಟಾಯಿತೆಂದು, ಸೇಡಿನಿಂದ ರಾಹು ಕೇತುಗಳು ಸೂರ್ಯ–ಚಂದ್ರರ ಪ್ರಕಾಶಕ್ಕೆ ಅಡ್ಡಿ ಬಂದು, ಸೂರ್ಯಗ್ರಹಣ, ಚಂದ್ರಗ್ರಹಣಗಳು ಆಗುವವು.

ಮೊಲದ ಚಿಹ್ನೆಯುಳ್ಳ ಚಂದ್ರದರ್ಶನದಿಂದ ದುಃಖಗಳು ನಿವಾರಣೆಯಾಗುತ್ತವೆ. ಮತ್ತು ಬಲಭಾಗದಲ್ಲಿ ಇಬ್ಭಾಗವಾದ ಪ್ರಕಾಶವುಳ್ಳ ಪೂರ್ಣಚಂದ್ರದರ್ಶನದಿಂದ ಮರಣವು ಸಂಭವಿಸಬಹುದು ಅಥವಾ ಮರಣವು ಸಮೀಪಿಸಿದವರಿಗೆ ಚಂದ್ರನು ಹಾಗೆ ಕಾಣುವನು ಎಂದು ಹಿಂದುಗಳ ನಂಬಿಕೆ.

ವೇದದಲ್ಲಿ ಬರುವ 'ಸಿನೀವಾಲಿ' ಶಬ್ದವು ಚಂದ್ರವಾಚಕವಾಗಿದೆಯೆಂದು ಹೇಳಬಹುದು. ಹೇಗೆಂದರೆ 'ಸಿನೀ' ಎಂದರೆ ಅಮೃತಕಲೆ, ಈ ಅಮೃತ ಕಲೆಯನ್ನು ಧರಿಸಿದವನು. ಚಂದ್ರನು, ವಾಸ್ತವಿಕವಾಗಿ ಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿವಸ ಸೂಕ್ಷ್ಮರೂಪದಲ್ಲಿ ಕಾಣುವ, ಒಂದೇ ಕಲೆಯನ್ನು ಧರಿಸಿದ ಚಂದ್ರನಿಗೆ 'ಸಿನೀವಾಲಿ' ಎಂದು ಹೇಳಬೇಕು. ಭಾಷಾಶಾಸ್ತ್ರಜ್ಞರು ಸುಮೇರ ಮತ್ತು ಖಾರ್ಡಿಯನ್ ಸಂಸ್ಕೃತಿಯ ಭಾಷಾಶಬ್ದವೆಂದು ಹೇಳುತ್ತಾರೆ. ಸುಮೇರ ಮತ್ತು ಖಾರ್ಡಿಯನ್ ಸಂಸ್ಕೃತಿಯ ಕಾಲಕ್ಕೆ ಚಂದ್ರೋಪಾಸಕರೂ, ಚಂದ್ರನ ದೇವಸ್ಥಾನಗಳೂ ಇದ್ದವೆಂದು ಇತಿಹಾಸದ ಮೂಲಕ ತಿಳಿದು ಬರುವವರಿಂದ, ಶಾಸ್ತ್ರಜ್ಞರ ಹೇಳಿಕೆಯನ್ನು ಒಪ್ಪಬಹುದು. ಹೀಗೆ ಹೇಳಿದಾಗ ವೈದಿಕ ಸಂಪ್ರದಾಯಸ್ಥರಿಂದ ಪ್ರಾಮಾಣಿಕವಾಗಿ ಸಮರ್ಥಿಸಲ್ಪಟ್ಟ ವೇದಾಪೌರುಷೇಯತ್ವವು ಇಲ್ಲವೆಂದು ತಿಳಿಯಬಾರದು.

ಇದೇ ರೀತಿಯಾಗಿ 'ಮಾರ್ತಾಂಡಃ' ಶಬ್ದವು ಚಂದ್ರವಾಚಕವಾಗಿದೆಯೇ ಹೊರತು ಸೂರ್ಯವಾಚಕವಾಗುವದಿಲ್ಲವೆಂದು ಕನ್ನಡ–ಇತಿಹಾಸ ಸಂಶೋಧಕರೆಂದು ಪ್ರಸಿದ್ಧರಾದ ಶಂ.ಬಾ. ಜೋಶಿಯವರು, ನಾನು ಇತ್ತೀಚೆಗೆ ಅವರನ್ನು ಸಂದರ್ಶಿಸಿದಾಗ ಹೇಳಿದರು. ಹೀಗೆ ಅರ್ಥ ಮಾಡಲು ಒಂದೆರಡು ಕಾರಣಗಳನ್ನು ಸೂಚಿಸಿದರು. ಮೊದಲನೆಯದಾಗಿ 'ಕ್ಷಯವನ್ನು ಹೊಂದಿದ ಬೀಜರೂಪದಿಂದ ಹುಟ್ಟಿದವನು', ಅರ್ಥಾತ್ ಕ್ಷಯವನ್ನೂ ವೃದ್ಧಿಯನ್ನೂ ಹೊಂದುವವನು. ಕಾರಣ ಮಾರ್ತಾಂಡ ಎಂದರೆ ಚಂದ್ರನು. ಆದರೆ ಸಮಸ್ತ ಪ್ರಪಂಚದಲ್ಲಿ ಅನಿತ್ಯ ಪದಾರ್ಥಗಳೆಲ್ಲವೂ ಕ್ಷಯ–ಎಂದರೆ ನಾಶವಾಗುತ್ತವೆ. ವೃದ್ಧಿ–ಎಂದರೆ ಹುಟ್ಟುತ್ತವೆ. ಹೀಗೆ ಅತಿವ್ಯಾಪ್ತಿದೋಷ ಬರುವುದರಿಂದ ಮೇಲ್ಕಾಣಿಸಿದ ಮಾರ್ತಾಂಡ ಶಬ್ದದ ವಿಗ್ರಹವು 'ಚಂದ್ರ' ಎಂದು ಅರ್ಥೈಸಲು ಪುಷ್ಟಿಯನ್ನು ಕೊಡುವುದಿಲ್ಲವೆಂದು ನಿಖರವಾಗಿ ಹೇಳಬಹುದು.

ಎರಡನೆಯದಾಗಿ ಋಗ್ವೇದದಲ್ಲಿ ಬರುವ ಈ ಮಾರ್ತಾಂಡ ಶಬ್ದದ ಸಂದರ್ಭವನ್ನು ಅವಲೋಕಿಸಿದಾಗ ಸಲಿಲಸ್ವರೂಪಿಯಾದ ಅದಿತಿಯಿಂದ ಹುಟ್ಟಿದ ಶಿಶುವು ಮಾರ್ತಾಂಡ ಎಂದು ತಿಳಿದುಬರುವುದು. ಈ ಸಂದರ್ಭಕ್ಕೆ ಅನುಸರಿಸಿ ಸಲಿಲಸ್ವರೂಪಿ ಅದಿತಿಯಿಂದ ಶೀತಸ್ವಭಾವದ ಚಂದ್ರನೇ ಹೊರತು ಉಷ್ಣಸ್ವಭಾವದ ಸೂರ್ಯನು ಹುಟ್ಟುವದು ಅಸಂಭವ ಎಂದು ಶಂ. ಬಾ. ಜೋಶಿಯವರು ಹೇಳಿದರು. ಆದರೆ ಎಲ್ಲ ವೇದವಾಕ್ಯಗಳಿಗೆ ಲೌಕಿಕಾರ್ಥ ಅಥವಾ ಧ್ವನ್ಯರ್ಥವನ್ನು ಹೇಳದೇ ಅಲೌಕಿಕಾರ್ಥವನ್ನು ಹೇಳಲೇಬೇಕಾಗುವುದೆಂದು ಮೀಮಾಂಸಾಶಾಸ್ತ್ರಕಾರರು ಸಮರ್ಥಿಸಿದ್ದಾರೆ. ಇದನ್ನು ಒಪ್ಪದ ಪಕ್ಷದಲ್ಲಿ ಸಮಸ್ತ ಆಸ್ತಿಕಪ್ರಪಂಚದ ಬೇರನ್ನೇ ಕೀಳುವಂತಾಗುವುದು. ಇದರ ನಿರ್ಣಯದ ಹೊಣೆ ಆಸ್ತಿಕಪಂಡಿತರ ಮೇಲಿರುವುದೆಂದು ನಾನು ಭಾವಿಸುತ್ತೇನೆ.

ಹೀಗೆ ಹಿಂದೂಧರ್ಮದಲ್ಲಿ ಚಂದ್ರನ ವಿಶೇಷ ಆಸಕ್ತಿಯನ್ನು ಹುಟ್ಟಿಸುವಂತಹ ಅನೇಕ ವಿಷಯಗಳು ತಿಳಿದುಬರುತ್ತವೆ, ಒಟ್ಟಾರೆ, ಚಂದ್ರನು ವೈವಿಧ್ಯಮಯವಾದ ವಿಶಿಷ್ಟಪೂರ್ಣಎಂದ ಸ್ಥಾನವನ್ನು ಪಡೆದು ಆಹ್ಲಾದಕರವಾದ ಶಾಂತಿಯನ್ನು ದಯಪಾಲಿಸಿದ್ದಾನೆ.

ಶ್ರೀಮನ್ನಾಗೇಂದ್ರಭೋಗ ಸ್ಫುರದರುಣ
ಮಣಿ ದ್ಯೋತಿ ಸಂಧ್ಯಾನಿಬದ್ಧ
ಪ್ರೇಮಂ ಪ್ರೋದ್ಯತ್ತರಂಗೋಚ್ಚರದಮರ
ನದೀ ಶೀಕರೋದಾರ ತಾರಾ
ರಾಮಂ ಹೇಮ ಪ್ರಭಾಪ್ರಸ್ಫುರಿತ ಗಿರಿಶ
ಚಂಚಜ್ಜಟಾಜಾಲ ಜೂಟ
ವ್ಯೋಮ ಪ್ರೋದ್ಭಾಸಿ ಚಂದ್ರಂ ತ್ರಿಭುವನ
ಜನಕಾನಂದಮಂ ಮಾಡುಗೆಂದು ॥

– ನಾಗವರ್ಮ.

---

**ಶ್ರೀ ಕೃಷ್ಣಮೂರ್ತಿ ಅರ್ಚಕ** ಎಂ.ಎ.

ಕಿಶೋರ ಜಗತ್

# ತಿರುಪತಿಯಲ್ಲಿ

ಕರ್ನಾಟಕದ ಹರಿದಾಸರಿಗೂ, ತಿರುಪತಿಯ ತಿಮ್ಮಪ್ಪನಿಗೂ ಹತ್ತಿರದ ನಂಟು. ಪುರಂದರದಾಸರು ಪುರಂದರ ವಿಠಲನೆಂಬ ಅಂಕಿತದಲ್ಲಿ ಪದಗಳನ್ನು ರಚಿಸಿದರೂ, ಪಂಡರಿಯ ವಿಠಲನಲ್ಲಿ ತಾವಿಟ್ಟಿದ್ದ ಭಕ್ತಿ ಪ್ರೇಮವನ್ನು ತಿರುಪತಿಯ ತಿಮ್ಮಪ್ಪನಲ್ಲಿಯೂ ತೋರಿದರು. ಪುರಂದರದಾಸರಿಂದ ಜಗನ್ನಾಥದಾಸರವರೆಗೆ ಹರಿದಾಸರುಗಳು ಪುರಂದರ ವಿಠಲ, ತಂದೆ ಪುರಂದರ ವಿಠಲ, ವಿಜಯವಿಠಲ, ಜಗನ್ನಾಥವಿಠಲ, ಗುರುಜಗನ್ನಾಥವಿಠಲ ಎಂಬ ಅಂಕಿತವನ್ನಿಟ್ಟು ಕೊಂಡು, ಪಂಢರಪುರದ ವಿಠಲನನ್ನು ಆರಾಧ್ಯ ದೈವವಾಗಿಟ್ಟು ಕೊಂಡಿದ್ದರೂ, ತಿರುಪತಿ ತಿಮ್ಮಪ್ಪನನ್ನು ತಮ್ಮ ಭಕ್ತಿಯ ಕೇಂದ್ರವನ್ನಾಗಿಟ್ಟು ಕೊಂಡರು. ಪುರಂದರ ದಾಸರು ಮತ್ತು ವ್ಯಾಸರಾಯರ ನಂತರ ಕನ್ನಡ ನಾಡಿನ ಹರಿದಾಸರುಗಳು ತಮ್ಮ ಲಕ್ಷ್ಯವನ್ನು ವಿಶೇಷವಾಗಿ ತಿರುಪತಿ ತಿಮ್ಮಪ್ಪನಲ್ಲಿ ಇರಿಸಿ ಕೊಂಡಿದ್ದರು. ಇದಕ್ಕೆ ಪ್ರಬಲವಾದ ಕಾರಣಗಳಿವೆ. ಕನ್ನಡನಾಡಿನ ಸಕಲ ಜಾತಿಧರ್ಮದವರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತಿರುಪತಿ ತಿಮ್ಮಪ್ಪನ ಒಕ್ಕಲಾಗಿದ್ದಾರೆ. ಶೈವರಲ್ಲಿಯೂ ಅವನ ಒಕ್ಕಲುಗಳಿದ್ದಾರೆ. ಪ್ರಕೃತ ಕನಕದಾಸರಿಗೂ, ತಿರುಪತಿ ತಿಮ್ಮಪ್ಪನಿಗೂ ನಡುವೆ ಇದ್ದ ಸಂಬಂಧವನ್ನು ವಿವರಿಸಲಾಗಿದೆ.

ಕನಕದಾಸರು ಜನ್ಮತಃ ಕುರುಬರು. ಧಾರವಾಡ ಜಿಲ್ಲೆಯ ಕಾಗಿನೆಲೆಯಲ್ಲಿ ಅವರು ಆದಿಕೇಶವನ ವಿಗ್ರಹವನ್ನು ಸ್ಥಾಪಿಸಿದವರು. ಅವರು ಡಣಾಯಕರಾಗಿದ್ದು, ಮೊದಲಿಂದಲೂ ದೇವರಲ್ಲಿ ವಿಶ್ವಾಸವಿಟ್ಟು ಕೊಂಡಿದ್ದರು. ಇಂದಿಗೂ ಕನ್ನಡನಾಡಿನ ಕುರುಬರಲ್ಲಿ, ತಿರುಪತಿ ತಿಮ್ಮಪ್ಪನನ್ನು ಮನೆದೇವರಾಗಿ ಇಟ್ಟು ಕೊಂಡಿರುವರು ಹೆಚ್ಚು ಪ್ರಮಾಣದಲ್ಲಿದ್ದಾರೆ. ತಿರುಪತಿ ತಿಮ್ಮಪ್ಪನು ಕನಕದಾಸರ ಮನೆತನದ ದೇವರಾಗಿದ್ದನು. ಅದೇನೇ ಇರಲಿ, ಚಿಕ್ಕ ಪಾಳೆಯಗಾರರಾಗಿದ್ದ ಅವರ ಜೀವನದಲ್ಲಿ ಅಪೂರ್ವ ಪರಿವರ್ತನೆಯುಂಟಾಗಿ, ಹರಿದಾಸರಾದರು. ತಮ್ಮ ಪದವಿ ಐಸಿರಿಗಳನ್ನು ಕೃಷ್ಣಾರ್ಪಣವೆಂದರು.

ಪುರಂದರದಾಸರಂತೆ, ವಿಜಯನಗರದಲ್ಲಿ ಕೃಷ್ಣದೇವರಾಯನ ರಾಜಗುರುಗಳಾಗಿದ್ದ ವ್ಯಾಸರಾಯರಲ್ಲಿ ಶಿಷ್ಯತ್ವ ಪಡೆದು, ಕಾಗಿನೆಲೆಯ ಆದಿಕೇಶವನ ಅಂಕಿತದಲ್ಲಿ ಪದಗಳನ್ನು ರಚಿಸುತ್ತಾ ಉಡುಪಿ, ತಿರುಪತಿ, ಶ್ರೀರಂಗ, ನಂಜನಗೂಡು ಮುಂತಾದ ದೇವಸ್ಥಾನಗಳಿಗೆ ತೀರ್ಥಯಾತ್ರೆ ಮಾಡಿದರು.



# ಕನಕದಾಸರು

ಒಮ್ಮೆ ಕನಕದಾಸರಿಗೆ ಕನಸಿನಲ್ಲಿ ಕಾಣಿಸಿಕೊಂಡು, ತಿರುಪತಿಯ ವೆಂಕಟೇಶನು, "ಕನಕಾ, ನನ್ನ ಮದುವೆ ನೋಡಲು ತಿರುಪತಿಗೆ ಬಾ" ಎಂದು ಹೇಳಿದನು. ಸೀತೆಯೊಡನೆ ಮದುವೆಯಾಗಲು ಇದು ತ್ರೇತಾಯುಗವೆ? ರುಕ್ಮಿಣಿಯೊಡನೆ ಮದುವೆಯಾಗಲು ಇದೇನು ದ್ವಾಪರವೆ? ಎಂದು ಕನಕದಾಸರು ತಮಾಷೆ ಮಾಡಿದರು. "ಕನಕಾ, ಪದ್ಮಾವತಿ ಕಲ್ಯಾಣ ಇದೆ ಕಣೊ, ತಪ್ಪದೆ ಬಾ" ಎಂದು ಮತ್ತೆ ಆಹ್ವಾನಿಸಿದ.

ಕನಕದಾಸರು, ಏಕತಾರಿ ಹಿಡಿದುಕೊಂಡು ಪದಗಳನ್ನು ಹಾಡುತ್ತಾ, ಕಾಲ್ನಡಿಗೆಯಲ್ಲಿ ತಿರುಪತಿಗೆ ಬಂದರು. ತಿರುಪತಿಯ ಮಹಂತರ ಕನಸಿನಲ್ಲಿ ಕಾಣಿಸಿ ಕೊಂಡ ವೆಂಕಟೇಶನು "ಕನಕದಾಸನೆಂಬ ನನ್ನ ಆಪ್ತ ಭಕ್ತನು ಇಲ್ಲಿಗೆ ಬರುತ್ತಿದ್ದಾನೆ. ಅವನನ್ನು ಯೋಗ್ಯ ಮರ್ಯಾದೆಯಿಂದ ದೇವಾಲಯಕ್ಕೆ ಕರೆದು ಕೊಂಡು ಬಾ" ಎಂದು ಆಜ್ಞಾಪಿಸಿದರು. ತಕ್ಕ ಗೌರವದೊಡನೆ, ದೇವಸ್ಥಾನದ ದ್ವಾರದಲ್ಲಿ ಮಹಂತರು ಬಂದು ನಿಂತರು. ಕನಕದಾಸರು ಅಲ್ಲಿಗೆ ಬರಲು, 'ಕನಕದಾಸರು ಬರುತ್ತಿದ್ದಾರೆಯೇ' ಎಂದು ಪ್ರಶ್ನಿಸಿದರು. ಆಗ ಕನಕದಾಸರು 'ಮುಂದೆ ಬರುವವರ ಹಿಂದೆ, ಹಿಂದೆ ಬರುವವರ ಮುಂದೆ' ಎಂದು ಒಗಟಾಗಿ ಉತ್ತರಿಸಿದರು. ಮಹಂತರಿಗೆ ಇವರಾಡುವ ಮಾತಿಗೆ ಬೇಸರವಾಗಿ ತಾವ್ಯಾರು ಎಂದು ಪ್ರಶ್ನೆ ಮಾಡುತ್ತಾರೆ. ಆಗ ಕನಕದಾಸರು "ಯಾತರವನೆಂದುಸುರಲಿ – ಜಗನ್ನಾಥ ಮಾಡಿದನು ನರಜನ್ಮವ. ಇಂದ್ರಿಯದ ಸೂತಕ ಮಲಮೂತ್ರ ದುರ್ಗಂಧದಿಂದಲಿ ಬಂದೆನು ನಿಜವರಿಯದೆ. ಬಂದದ್ದು ಮಾತ್ರ ಕುಳಿ ತಿಂದದ್ದು ಮೊಲೆಮಾಂಸ........... ನಿಶ್ಚಿಂತ ನಿರ್ದೋಷ ನೆಲೆಯಾದಿಕೇಶವನ ಹುಚ್ಚೇರಿದೆನಗೆ ಇನ್ಯಾತರ ಕುಲವಯ್ಯ" ಎಂದು ಮಾರ್ಮಿಕವಾಗಿ ಉತ್ತರಿಸುವರು. ಒಂದು ಕಂಬಳಿಯನ್ನು ಹೊದ್ದು ಕೊಂಡು, ಸೊಂಟಕ್ಕೆ ದುಪ್ಪಟಿಯನ್ನು ಸುತ್ತಿ ಏಕತಾರಿಯನ್ನು ಹಿಡಿದುಕೊಂಡು ಒಗಟು ಮಾತನಾಡುವ ಕನಕದಾಸರ ಗುರುತನ್ನು ಹಿಡಿಯಲು ಮಹಂತರಿಗೆ ಸಾಧ್ಯವಾಗಲಿಲ್ಲ. ತಮ್ಮಷ್ಟಕ್ಕೆ ತಾವು ಮಹಂತರು ಹಿಂತಿರುಗಲು ಕನಕದಾಸರಿಗೆ ಯಾವ ತರದ ಸ್ವಾಗತವೂ ದೊರಿಯಲಿಲ್ಲ. ಅವರಿಗೆ ದೇವರದರ್ಶನವೂ ಆಗಲಿಲ್ಲ. ಹೊಟ್ಟೆಗೆ ಏನೂ ಇಲ್ಲದೆ, ಹಸಿವಿನಿಂದ ಬಳಲುತ್ತಾ, ಮಲಗಲು ಹೊದಿಕೆ ಹಾಸಿಗೆ ಇಲ್ಲದೆ ಚಳಿಯಲ್ಲಿ ಗಡಗಡನೆ ನಡುಗುತ್ತಾ, ಒಂದು ಮೂಲೆಯಲ್ಲಿ ಮಲಗಿದರು. ವೆಂಕಟೇಶನು ನನ್ನನ್ನು ಕರೆಸಿ ಕೊಂಡು ಹೀಗೆ ಅವಮಾನಕ್ಕೆ ಗುರಿಯಾಗುವಂತೆ ಮಾಡಿದನಲ್ಲ ಎಂದು ಪರಿತಪಿಸಿದರು. ದೇವರ ಮೇಲೆ ಸಿಟ್ಟು ಬಂದಿತು. 'ಬಂದೆ ನಮ್ಮ ಗೋವಿಂದಶೆಟ್ಟಿ – ಇಂದು ನಿನ್ನ ಮದುವೆಗೆ ಬಾರೆಂದೆನೆ ಅಪ್ಪಅತಿರಸ ತುಪ್ಪ ಚೆನ್ನ ಪಾಲು ಒಪ್ಪುವ ಸಕ್ಕರೆ ಯಾಲಕ್ಕಿಯು ಅಪರೂಪವಾದ ಕಜ್ಜಾಯವನ್ನೆಲ್ಲ ಚಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ. ಒಡೆದ ಮಡಕೆಯಲ್ಲಿ ಅರೆದು ನಾಮವ ಮಾಡಿ ತಡೆಯದೆ ಒಂದೊಂದು ಕಾಸಿಗೆ ಕೊಡುವ, ಒಡಲು ತುಂಬೆ ಮಿಕ್ಕ ಭಕ್ತರ ನೋಡದೆ ಒಡವೆಯ ಗಳಿಸುವ ಲೋಭಿಶೆಟ್ಟಿ, ಶೇಷಗಿರಿಯ ಮೇಲೆ

(32 ನೇ ಪುಟ ನೋಡಿ)

# ಮಹರ್ಷಿ ಯಾಜ್ಞವಲ್ಕ್ಯ

ಮಹರ್ಷಿ ವೈಶಂಪಾಯನರ ಆಶ್ರಮದಲ್ಲಿ ಬಹಳ ವಿದ್ಯಾರ್ಥಿಗಳು ಓದುತ್ತಿದ್ದರು. ಯಾಜ್ಞವಲ್ಕ್ಯನು ವೈಶಂಪಾಯನನ ತಂಗಿಯ ಮಗ. ಅವನು ಅಲ್ಲಿಯೇ ಅಧ್ಯಯನ ಮಾಡುತ್ತಿದ್ದ. ಒಮ್ಮೆ ಋಷಿಗಳ ಭಾರೀ ಸಭೆಯೊಂದು ಜರುಗಿತು. ಆ ಸಭೆಯ ನಿಯಮವೇನೆಂದರೆ, ಯಾವ ಋಷಿ ಆ ಸಭೆಗೆ ಬರುವುದಿಲ್ಲವೋ, ಅವನಿಗೆ ಬ್ರಹ್ಮಹತ್ಯಾ ದೋಷ ಬರುತ್ತದೆ. ವೈಶಂಪಾಯನ ಯಾವುದೋ ಕಾರಣದಿಂದ ಸಕಾಲದಲ್ಲಿ ಬರಲಿಲ್ಲ. ಅವನಿಗೆ ಆ ಶಾಪ ತಗುಲಿತು. ಆಗ ಅವನು ತನ್ನ ಶಿಷ್ಯರನ್ನೆಲ್ಲ ಕರೆದು "ನೀವು ಈ ಶಾಪದ ಪ್ರಾಯಶ್ಚಿತ್ತ ಮಾಡಿರಿ" ಎಂದು ಹೇಳಿದ.

ಯಾಜ್ಞವಲ್ಕ್ಯ ಮಾವನಿಗೆ ಅತ್ಯಂತ ಸಲುಗೆಯವನು. ಆತ ಹೇಳಿದ "ಮಾವಾ, ನೀವು ಎಲ್ಲರೊಡನೆ ಏಕೆ ಹೇಳುವಿರಿ? ನಾನೊಬ್ಬನೇ ಪ್ರಾಯಶ್ಚಿತ್ತ ಮಾಡಿಬಿಡುವೆನು."

ಇದನ್ನು ಕೇಳಿ ಕುಪಿತನಾದ ವೈಶಂಪಾಯನ ಹೇಳಿದ "ನೀನು ಬ್ರಾಹ್ಮಣರ ಅಪಮಾನ ಮಾಡಿದೆ. ನೀನು ನನ್ನ ಶಿಷ್ಯನಾಗಿರಲು ಅಯೋಗ್ಯ. ನಾನು ನಿನಗೆ ಕಲಿಸಿದುದು ಮರೆತು ಹೋಗಲಿ. ನೀನು ಹೊರಟು ಹೋಗು". ಎಲ್ಲವೂ ಮರೆತುಹೋದ ಯಾಜ್ಞವಲ್ಕ್ಯ ಅಲ್ಲಿಂದ ಹೊರಟ. ಆದರೆ ಆತ ವೇದ ಕಲಿಯಲು ಅಪೇಕ್ಷಿಸುತ್ತಿದ್ದ. ಆತ ಸೂರ್ಯನನ್ನು ಕುರಿತು ತಪಸ್ಸು ಮಾಡಿದಾಗ ಸೂರ್ಯನು ಪ್ರತ್ಯಕ್ಷನಾಗಿ ಪ್ರಸನ್ನನಾಗಿ ಯಾಜ್ಞವಲ್ಕ್ಯನಿಗೆ ಯಜುರ್ವೇದವನ್ನು ಕಲಿಸಿದನೆಂದು ಹೇಳುತ್ತಾರೆ.

ಹಾಗೆ ವೇದ ಕಲಿತ ನಂತರ ಮಿಥಿಲೆಯ ಹತ್ತಿರ ಆಶ್ರಮ ಮಾಡಿಕೊಂಡು ವಾಸಿಸತೊಡಗಿದನು. ಯಾಜ್ಞವಲ್ಕ್ಯ ದೊಡ್ಡ ವಿದ್ವಾಂಸ. ಆ ಕಾಲದ ಋಷಿಗಳೆಲ್ಲರೂ ಆತನೊಡನೆ ವಾದ ಮಾಡಿ ಸೋತಿದ್ದರು. ಒಮ್ಮೆ ಜನಕ ಮಹಾರಾಜನ ಆಸ್ಥಾನದಲ್ಲಿ ಅನೇಕಾನೇಕ ದೇಶ ವಿದೇಶದ ವಿದ್ವಾಂಸರೆಲ್ಲ ಸೇರಿದ್ದರು. ರಾಜಾ ಜನಕನೂ ಒಬ್ಬ ಮಹಾ ವಿದ್ವಾಂಸನೇ. ದೇಶವಿದೇಶದ ವಿದ್ವಾಂಸರನ್ನು ಕರೆಸಿ ಆತ ಧರ್ಮ ಚರ್ಚೆ ಮಾಡುತ್ತಿದ್ದ. ಆ ದಿನವೂ ಅದೇ ರೀತಿಯ ಸಭೆ ನಡೆದಿತ್ತು. ಆಗ ಜನಕರಾಜನು ಘೋಷಿಸಿದ. "ಯಾವ ವಿದ್ವಾಂಸನು ಬ್ರಹ್ಮವನ್ನು ಎಲ್ಲರಿಗಿಂತ ಹೆಚ್ಚು ತಿಳಿದುಕೊಂಡಿರುವೆನೆಂದು ವಾದಿಸುವನೋ ಅವನು ಎದುರು ಕಟ್ಟಿರುವ ಒಂದು ಸಾವಿರ ಆಕಳನ್ನು ಹೊಡೆದುಕೊಂಡು ಹೋಗಬಹುದು".

ಈ ಘೋಷಣೆ ಕೇಳಿ ಸಭೆಯಲ್ಲಿ ಕೋಲಾಹಲ ವೆದ್ದಿತು. ಒಮ್ಮೆಲೇ ಎದ್ದು ನಿಲ್ಲಲು ಯಾರಿಗೂ ಧೈರ್ಯ ಸಾಕಾಗಲಿಲ್ಲ. ಇದನ್ನು ನೋಡಿ ಯಾಜ್ಞವಲ್ಕ್ಯ ದಡಕ್ಕನೆ ಎದ್ದು ನಿಂತು ತನ್ನ ಶಿಷ್ಯನನ್ನು ಕರೆದು ಹೇಳಿದ, "ಸಾಮಶ್ರವಾ, ಈ ಆಕಳನ್ನು ಆಶ್ರಮಕ್ಕೆ ಹೊಡೆದುಕೊಂಡು ಹೋಗು."

---

## ರಸಿಕ ಪುತ್ತಿಗೆ

---

ಸಾಮಶ್ರವನು ಎದ್ದು ನಿಂತಿದ್ದನಷ್ಟೆ. ಒಬ್ಬ ಬ್ರಾಹ್ಮಣನು ಕುಪಿತನಾಗಿ ಹೇಳಿದ. "ಯಾಜ್ಞವಲ್ಕ್ಯ, ನಿಜವಾಗಿಯೂ ನಮಗಿಂತ ಹೆಚ್ಚು ನೀನು ಬ್ರಹ್ಮದ ಕುರಿತಾಗಿ ಬಲ್ಲೆಯಾ?"

ಯಾಜ್ಞವಲ್ಕ್ಯ ಹೇಳಿದ "ತಿಳಿದುದರಿಂದಲೇ ಆಕಳನ್ನು ಹೊಡೆದುಕೊಂಡು ಹೋಗಲು ಹೇಳುತ್ತಿದ್ದೇನೆ."

ಬ್ರಾಹ್ಮಣ ಹೇಳಿದ, "ಹಾಗಾದರೆ ನೀನು ಹೀಗೇ ಕೊಂಡು ಹೋಗಲು ನಾವು ಬಿಡುವುದಿಲ್ಲ ನಮ್ಮೆಲ್ಲರ ಪ್ರಶ್ನೆಗಳಿಗೆ ಉತ್ತರ ಕೊಡಬೇಕಾಗಬಹುದು." ಯಾಜ್ಞವಲ್ಕ್ಯ ಹೇಳಿದ "ಕೇಳು, ಬ್ರಾಹ್ಮಣ ಕೇಳು, ಏನು ಕೇಳುವಿ?" ಆಗ ವಿದ್ವಾಂಸರುಗಳು ಒಬ್ಬರಿಗಿಂತ ಒಬ್ಬರು ಹೆಚ್ಚಾಗಿ ಆತನೊಡನೆ ಪ್ರಶ್ನೆ ಕೇಳಲು ಪ್ರಾರಂಭಿಸಿದರು. ಪ್ರಶ್ನೆಗಳ ಸುರಿಮಳೆ. ಎಲ್ಲದಕ್ಕೂ ಸರಿಯಾದ ಉತ್ತರ ನೀಡಿ ಯಾಜ್ಞವಲ್ಕ್ಯ ಅವರನ್ನು ಬೆರಗು ಮಾಡಿದ. ಆ ಬ್ರಾಹ್ಮಣರಲ್ಲಿ ಒಬ್ಬ ಹೆಂಗಸೂ ಇದ್ದಳು. ಆಕೆ ಮಹಾ ಪಂಡಿತೆಯಾಗಿದ್ದಳು. ಅವಳ ಹೆಸರು ಗಾರ್ಗಿ. ಕೊನೆಗೆ ಅವಳೂ ಎದ್ದಳು. ಆಕೆ ಹೇಳಿದಳು, "ಬ್ರಾಹ್ಮಣರೇ, ನಾನು ಯಾಜ್ಞವಲ್ಕ್ಯನಿಗೆ ಎರಡು ಪ್ರಶ್ನೆ ಕೇಳುತ್ತೇನೆ. ಅವುಗಳಿಗೆ ಅವನು ಉತ್ತರ ಕೊಟ್ಟರೆ ಅವನಿಗಿಂತ ಹೆಚ್ಚು ಬ್ರಹ್ಮವನ್ನು ತಿಳಿದವರು ಬೇರಿಲ್ಲ".

ಬ್ರಾಹ್ಮಣರ ಅಪ್ಪಣೆ ಪಡೆದು ಗಾರ್ಗಿ ಎರಡು ಪ್ರಶ್ನೆ ಕೇಳಿದಳು. ಸಹಜಭಾವದಿಂದ ಯಾಜ್ಞವಲ್ಕ್ಯನು ಅವುಗಳಿಗೆ ಉತ್ತರಿಸಿದನು. ಆಗ ಗಾರ್ಗಿ ಹೇಳಿದಳು, "ಬ್ರಾಹ್ಮಣರೇ ಬನ್ನಿ, ಈತನಿಗೆ ನಮಸ್ಕಾರ ಮಾಡೋಣ. ಇನ್ನು ಇವನಿಗಿಂತ ಹೆಚ್ಚು ಬ್ರಹ್ಮವನ್ನು ಬಲ್ಲೆವೆಂದು ಯಾರೂ ವಾದಿಸುವಂತಿಲ್ಲ."

ಹೀಗಿದ್ದ ಯಾಜ್ಞವಲ್ಕ್ಯ. ವಿದೇಹರಾಜ ಜನಕ, ಕಾಶೀರಾಜ ಅಜಾತಶತ್ರು ಎಲ್ಲರೂ ಅವನನ್ನು ಗೌರವಿಸುತ್ತಿದ್ದರು. ಆತನಿಂದ ಶಿಕ್ಷಣ ಪಡೆಯುತ್ತಿದ್ದರು. ಯಾಜ್ಞವಲ್ಕ್ಯ ಅನೇಕ ಗ್ರಂಥಗಳನ್ನು ರಚಿಸಿದ ಅವುಗಳಲ್ಲಿ "ಯಾಜ್ಞವಲ್ಕ್ಯ ಸ್ಮೃತಿ" ಪ್ರಧಾನವಾದುದು. ಈತ ಯೋಗ, ಶಾಸ್ತ್ರ, ವ್ಯಾಕರಣ, ಆಯುರ್ವೇದ, ಧನುರ್ವೇದಗಳಲ್ಲಿ ಪರಮ ಪಂಡಿತನಾಗಿದ್ದ. "ಚೆನ್ನಾಗಿ ವಿಚಾರ ಮಾಡಿ ಮಾತಾಡಬೇಕು" ಎಂಬುದು ಆತನ ಹೇಳಿಕೆಯಾಗಿತ್ತು. "ನಮ್ಮ ಅಭಿಮಾನ ವ್ಯಕ್ತವಾಗುವ—ಬೇರೆಯವರಿಗೆ ಅಪಮಾನವಾಗುವ ಮಾತು ಹೇಳಬಾರದು. ನಂತರ ಪಶ್ಚಾತ್ತಾಪ ಪಡಬೇಕಾದ ಮಾತು ಆಡಬಾರದು." ಇದು ಯಾಜ್ಞವಲ್ಕ್ಯನ ಉಪದೇಶ.

ಯಾಜ್ಞವಲ್ಕ್ಯ ವೈದಿಕ ಸಂಸ್ಕಾರಗಳ ಶ್ರೇಷ್ಠ ಋಷಿಯಾಗಿದ್ದ. ಆತನಿಗೆ ಇಬ್ಬರು ಹೆಂಡತಿಯರಿದ್ದರು. ಒಬ್ಬಳ ಹೆಸರು ಮೈತ್ರೇಯಿ; ಮತ್ತೊಬ್ಬಳು ಕಾತ್ಯಾಯನಿ. ಆಗಿನ ಋಷಿಮುನಿಗಳೆಲ್ಲರೂ ಗೃಹಸ್ಥರಾಗಿದ್ದರು. ಅವರು ಸಂಸಾರವನ್ನು ಬಿಟ್ಟಿರುವುದರಲ್ಲಿ ನಂಬಿಕೆ ಉಳ್ಳವರಾಗಿರಲಿಲ್ಲ. ಸಂಸಾರದಲ್ಲಿ ಇದ್ದುಕೊಂಡೇ ತಪಸ್ಸು ಮಾಡಿ ಸಕಾಲದಲ್ಲಿ ಸನ್ಯಾಸಿಗಳಾಗುತ್ತಿದ್ದರು. ಯಾಜ್ಞವಲ್ಕ್ಯನೂ ಒಂದು ದಿನ ಸನ್ಯಾಸಿಯಾಗುವ ವಿಚಾರ ಮಾಡಿದ. ಆಗ ಹೆಂಡತಿ ಮೈತ್ರೇಯಿಯನ್ನು ಕರೆದು ಹೇಳಿದ "ಮೈತ್ರೇಯಿ, ನಾನು ಸನ್ಯಾಸ ಗ್ರಹಣ ಮಾಡುತ್ತೇನೆ. ಆದುದರಿಂದ

ನನ್ನಲ್ಲಿ ಇರುವುದನ್ನು ನಿಮಗಿಬ್ಬರಿಗೆ ಹಂಚುವುದೆಂದು ಯೋಚಿಸಿದ್ದೇನೆ".

ಕಾತ್ಯಾಯಿನಿ ಬಹಳ ಸರಳ ಸ್ವಭಾವದವಳು. ಪತಿಯೇ ಸರ್ವಸ್ವವೆಂದು ತಿಳಿದವಳು. ಪತಿಯ ಸೇವೆಯೇ ಸರ್ವಸ್ವವೆಂದರಿತವಳು ಆದರೆ ಮೈತ್ರೇಯಿ ತುಂಬಾ ವಿಚಾರವಂತೆ; ವಿದ್ವಾಂಸಳು. ಕಾತ್ಯಾಯನಿಯು ಪತಿಯ ಸಂಪತ್ತಿನ ಪಾಲು ಪಡೆಯಲು ಸಿದ್ಧಳಾದಳು. ಆದರೆ ಮೈತ್ರೇಯಿ ಹೇಳಿದಳು– "ಪತಿದೇವಾ, ನನಗೆ ಬಹಳ ಧನ ದೊರೆತಿದೆ. ಆದರೆ ಇದುವೇ ನಿಜವಾದ ಸುಖದ ಸಾಧನವೇ ?"

ಪತ್ನಿಯ ಮಾತು ಕೇಳಿ ಯಾಜ್ಞವಲ್ಕ್ಯ ಪ್ರಸನ್ನನಾಗಿ ಹೇಳಿದ – 'ಮೈತ್ರೇಯಿ, ನೀನು ನಿಜ ಹೇಳಿದೆ. ಧನದಿಂದ ನಿಜವಾದ ಸುಖ ಸಿಗುವುದಿಲ್ಲ. ಧನವನ್ನು ಪಡೆದು ನೀನು ವಿಲಾಸಿಯಾಗುವೆ. ಮುಕ್ತಿ ದೊರೆಯಲಾರದು".

ಮೈತ್ರೇಯಿ ಹೇಳಿದಳು – "ಧನದಿಂದ ಸುಖ ಸಿಕ್ಕುವುದಿಲ್ಲವಾದರೆ ಅದನ್ನು ಪಡೆದು ನಾನೇನು ಮಾಡಬಲ್ಲೆ. ನಿಜವಾದ ಸುಖ ಸಿಗುವುದು ಯಾವುದರಿಂದ ಎಂದು ನೀವು ಬಲ್ಲಿರಿ. ಆ "ಜ್ಞಾನ" ವನ್ನೇ ನನಗೆ ಕೊಡಿರಿ".

ಆಗ ಯಾಜ್ಞವಲ್ಕ್ಯನು ಮೈತ್ರೇಯಿಗೆ ಮುಕ್ತಿ ದೊರೆಯುವ ಜ್ಞಾನವನ್ನು ನೀಡಿದನು. ಆತನ ಜ್ಞಾನದ ಸಾರವೇನೆಂದರೆ – " ಮನುಷ್ಯನಲ್ಲಿ ನಾನು, ನೀನು ಎಂಬ ಭೇದ ಭಾವವು ದೂರವಾಗಬೇಕು. ಇಡಿಯ ಜಗತ್ತು ನಮ್ಮದು. ಮನುಷ್ಯರೆಲ್ಲಾ ಒಂದೇ. ಇಡಿಯ ಜಗತ್ತಿನ ಪ್ರೇಮವೇ ನಿಜವಾದ ಪ್ರೇಮ. ಆದುದರಿಂದ ಕಣ್ಣು ನೋಡುವುದೆಲ್ಲದರಲ್ಲೂ ಪರಮಾತ್ಮನನ್ನು ನೋಡಲು ಪ್ರಯತ್ನಿಸು."

ಈ ರೀತಿಯ ಜ್ಞಾನವನ್ನು ಪಡೆದು ಮೈತ್ರೇಯಿಯು ಬಹಳ ಸಂತಸಪಟ್ಟಳು. ತನ್ನ ಇಬ್ಬರು ಪತ್ನಿಯರ ಮೇಲೆ ತನ್ನ ಕುಟುಂಬದ ಭಾರ ಹಾಕಿ ಯಾಜ್ಞವಲ್ಕ್ಯ ಸನ್ಯಾಸಿಯಾದ. ಅನೇಕ ಗ್ರಂಥಗಳ ರಚನೆ ಮಾಡಿದ. ಅನೇಕ ರೀತಿಯ ಜ್ಞಾನ ಜಗತ್ತಿಗೆ ನೀಡಿದ.

*

---

(30 ನೇ ಪುಟದಿಂದ )

ಇರುವ ತಿಮ್ಮಶೆಟ್ಟಿ, ದೇಶದೇಶಕ್ಕೆಲ್ಲ ಪ್ರಸಿದ್ಧ ಶೆಟ್ಟಿ ಆಶೆಯ ತೋರಿ ಮುಡುಪನ್ನೆ ತರಿಸುವ ಕೇಶವನಾರಾಯಣ ವೆಂಕಟಶೆಟ್ಟಿ' ಎಂದು ವ್ಯಂಗ್ಯವಾಗಿ ಹಾಡಿ, ತಿರುಪತಿಯ ವೆಂಕಟೇಶನನ್ನು ತರಾಟೆಗೆ ತೆಗೆದು ಕೊಳ್ಳುತ್ತಾರೆ. ಯಾರೋ ಒಬ್ಬ ಅಪರಿಚಿತನು ಅರ್ಧರಾತ್ರಿಯಲ್ಲಿ ಕನಕದಾಸರ ಬಳಿ ಬಂದು ಎಬ್ಬಿಸುತ್ತಾನೆ. ಬಿಸಿಬಿಸಿಯಾದ ಊಟವನ್ನೂ, ಬಿಸಿ ಹಾಲನ್ನು ಕನಕದಾಸರಿಗೆ ಕೊಡುತ್ತಾನೆ. ಹಸಿವೆಯಿಂದ ಬಳಲಿದ್ದ ದಾಸರು ಊಟವನ್ನು ಗಬಗಬನೆ ತಿನ್ನುವರು. ಹೊದಿಯಲು ಇಲ್ಲದೆ ಚಳಿಯಲ್ಲಿ ಗಡಗಡನೆ ನಡುಗುತ್ತಿದ್ದ ದಾಸರಿಗೆ ಹೊದೆಯಲು ಜರತಾರಿ ವಸ್ತ್ರವನ್ನು ಕೊಡುತ್ತಾನೆ. ದಾಸರು 'ನೀನ್ಯಾರಪ್ಪ, ಈ ನಡುರಾತ್ರಿಯಲ್ಲಿ ನನ್ನನ್ನು ಉಪಚರಿಸಿದವನು' ಎಂದು ಕೇಳುತ್ತಿದ್ದಂತೆ, ಪರಿಚಾರಕನ ವೇಶದಲ್ಲಿದ್ದ ವೆಂಕಟೇಶನು "ಮತ್ಯಾರು ಅಲ್ಲ ನಾನೇ'' ಎಂದು ಹೇಳುತ್ತಾ ಅಂತರ್ಧಾನನಾದನು.

ಆ[illegible]ವಸ್ಥಾನದಲ್ಲಿ ಒಂದು ಭಾರಿ ಗದ್ದಲವೇ ಆಯ್ತು. ದೇವರ ಮೇಲಿದ್ದ ಜರತಾರಿ ವಸ್ತ್ರವು ಕಳುವಾಯಿತೆಂದು, ಅರ್ಚಕರು ಕೂಗಾಡಿದರು. ಮಹಂತರ ಆಜ್ಞೆಯಂತೆ ದೇವಸ್ಥಾನದವರು ಕಳ್ಳನನ್ನು ಕಂಡುಹಿಡಿಯಲು ಹುಡುಕಾಡಿದರು. ಕನಕದಾಸರ ಮೇಲಿದ್ದ ಜರತಾರಿ ವಸ್ತ್ರವನ್ನು ನೋಡಿ, ಅವರೇ ಕಳ್ಳರೆಂದು ನಿರ್ಧಾರವಾಯ್ತು. ಕನಕದಾಸರಿಗೆ ಮೈಮುರಿಯುವಂತೆ ಪೆಟ್ಟು ಬಿದ್ದಿತು. ಆಗ ದಾಸರು ಪೆಟ್ಟಿನ ನೋವು ತಾಳದಾರದೆ, "ಮನವೆನ್ನ ಮಾತ ಕೇಳದು ಕಾಣೊ ಗೋವಿಂದ, ಮಹವ ಗೆಲ್ಲುವ ಬಗೆ ಎನಗಿಲ್ಲ ಗೋವಿಂದ। ಕನಸಿನಂತಹ ದೇಹ ಸ್ಥಿರವಲ್ಲ ಗೋವಿಂದ । ಬಿನುಗು ಬುದ್ಧಿಗಳನ್ನು ಬಿಡಿಸಯ್ಯ ಗೋವಿಂದ । ನೆನಹು ನಿನ್ನೊಳಗಿಟ್ಟು ಸಲಹಯ್ಯ ಗೋವಿಂದ । ನೆನೆವ ದಾಸರ ಮನದೊಳಗಿಹ ಗೋವಿಂದ । ವನಜಲೋಚನ ನಾ ನಿನ್ನವನಯ್ಯ ಗೋವಿಂದ । ಘನಮಹಿಮನೆ ನಿನ್ನ ಮೊರೆಹೊಕ್ಕೆ ಗೋವಿಂದ । ಮುನಿಗಳ ಮನದೊಳು ಮಿನುಗುವ ಗೋವಿಂದ । ನಿನಗಿಲ್ಲದಪಕೀರ್ತಿ ಎನಗೇನೊ ಗೋವಿಂದ" ಎಂದು ಹಾಡುವರು. ಪ್ರಾಯಶಃ ವೆಂಕಟೇಶನನ್ನು ಮೂದಲಿಸಿದ್ದರಿಂದ ಈ ತೆರನಾದ ಅವಸ್ಥೆಯು ತಮಗುಂಟಾಯಿತು. ದೇವರು ನನ್ನ ಮೇಲೆ ಮುಯ್ಯಿ ತೀರಿಸಿದ್ದಾನೆಂದು ದಾಸರು ಪಶ್ಚಾತ್ತಾಪ ಪಟ್ಟರು. ಒಡನೆಯೇ ಅವರ ದೇಹದ ಮೇಲೆ ಮೂಡಿದ್ದ ಬಾಸುಂಡೆಗಳು ಮಾಯವಾಗಿ ಶ್ರೀನಿವಾಸನ ಮೇಲೆ ಕಾಣಿಸಿ ಕೊಂಡವು. ಅರ್ಚಕರೂ, ಮಹಂತರೂ ಇದನ್ನು ನೋಡಿ ಗಾಬರಿಗೊಂಡರು. ಯಾವುದೋ ಭಕ್ತನಿಗೆ ಅಪಚಾರವಾಗಿರುವುದರಿಂದ ಹೀಗಾಯ್ತೆಂದು ಯೋಚಿಸಿದರು. ಅಲ್ಲಿರುವ ಬಾಲಕನ ಮೇಲೆ ದೇವರು ಬರಲು "ನನ್ನ ಭಕ್ತನಿಗೆ ಅಪಚಾರ ಮಾಡಿದ್ದೀರಿ. ಜರತಾರಿ ಧೋತ್ರವನ್ನು ಅವನಿಗೇ ಕೊಟ್ಟು ಬಿಡಿ, ಅವನನ್ನು ಕರೆದು ಸನ್ಮಾನ ಮಾಡಿ'' ಎಂದು ಭಗವದಾಜ್ಞೆ ಹೊರಟಿತು. ಮಹಂತರು ಛತ್ರ ಚಾಮರ ವಾದ್ಯ ಭಜಂತ್ರಿಗಳಿಂದ ಕನಕದಾಸರನ್ನು ದೇವಸ್ಥಾನಕ್ಕೆ ಕರೆಯುತ್ತಾರೆ. ದೇವರ ಮುಂದೆ ತೆರೆ ಹಾಕಿಸಿ, ಏಕಾಂತಧ್ಯಾನಕ್ಕೆ ಅವರಿಗೆ ಅವಕಾಶ ಮಾಡಿ ಕೊಡುತ್ತಾರೆ. ಮದುವೆಗೆಂದು ಕರೆಸಿ ತನ್ನವರಿಂದ ಅವಮಾನಿಸಿ ಮತ್ತೆ ಸನ್ಮಾನಿಸಿದ ವೆಂಕಟೇಶನ ಮೇಲೆ ದಾಸರಿಗೆ ಕೋಪ ಬರುತ್ತದೆ. ಕೋಪದಿಂದ "ನಿನ್ನ ನಾನೇನೆಂದನೋ ವೆಂಕಟರಾಯ। ಎನ್ನ ನೀ ಸಲಹಬೇಕೋ। ನಿನ್ನ ನಾನೇನೆಂದೆ ನಿಗಮಗೋಚರ ಪನ್ನಗಶಯನ ಪಾಲ್ಗಡಲೊಡೆಯನೆ ಕೃಷ್ಣಾ" ಎಂದು ಆವೇಶದಿಂದ ಹಾಡುತ್ತಾರೆ.

ಕನಕದಾಸರು ತಿರುಪತಿಯಲ್ಲಿ ಬಹಳ ಕಾಲ ಇದ್ದರೆಂದೂ, ಅವರು ತಿರುಪತಿ ತಿಮ್ಮಪ್ಪನ ಅವಿಚ್ಛಿನ್ನ ಭಕ್ತರಾಗಿದ್ದರೆಂದು ತಿಳಿದು ಬರುತ್ತದೆ. ದಾಸರು ಅಂತ್ಯ ಕಾಲವನ್ನು ತಿರುಪತಿಯಲ್ಲಿ ಕಳೆದರೆಂದು ಕೆಲವರ ಅಭಿಪ್ರಾಯವಾಗಿದೆ. ಅವರು ಅಂತ್ಯ ವೇಳೆಯಲ್ಲಿ ಪುರಂದರದಾಸರ ತಂಬೂರಿಯನ್ನು ತಿರುಪತಿಯ ಭಂಡಾರದಲ್ಲಿಟ್ಟು, ತಮ್ಮ ಏಕತಾರೆಯನ್ನೂ, ದಂಡವನ್ನೂ ದೇವಸ್ಥಾನದ ಗರ್ಭಗುಡಿಯ ಮಹಾದ್ವಾರದ ಮೇಲ್ಭಾಗದಲ್ಲಿ ಬಂಧಿಸಿದರೆಂದು ಐತಿಹ್ಯವಿದೆ. ಕನಕದಾಸರು ಏಕಾಂತ ಸೇವೆ ಮಾಡುತ್ತಿದ್ದರೆಂತಲೂ, ಬಹು ವೇಳೆಯಾದರೂ ಅವರು ಹೊರಗೆ ಬರದಿರುವುದನ್ನು ನೋಡಿ ಮಹಂತರು ತೆರೆಯನ್ನು ಸರಿಸಲು ದಾಸರು ತಿರುಪತಿಯ ಶ್ರೀನಿವಾಸನ ಪಾದರವಿಂದವನ್ನು ಸೇರಿದ್ದು ಕಂಡು ಬಂದಿತು.

ಇತಿಹಾಸದಲ್ಲಿ ಭಿನ್ನಾಭಿಪ್ರಾಯ ಇರುಬಹುದಾದರೂ, ಕನಕದಾಸರು ತಿರುಪತಿ ತಿಮ್ಮಪ್ಪನ ಆಪ್ತ ಭಕ್ತರಾಗಿದ್ದರೆಂಬುದೂ, ಅವರು ತಮ್ಮ ಜೀವಿತದ ಹೆಚ್ಚು ಭಾಗವನ್ನು ತಿರುಪತಿಯಲ್ಲಿ ಕಳೆದರೆಂಬುದೂ ನಿಸ್ಸಂದೇಹವಾಗಿದೆ.

★

---

**ಡಾ॥ ಸರ್ಜಾ ಚಂದ್ರಶೇಖರಯ್ಯ**

# ರಾಜಾಶ್ರಯದಲ್ಲಿ ವೈಷ್ಣವ ಧರ್ಮ

**ಶ್ರೀ ಕೆ. ರಮಾನಂದ ಎಂ.ಎ.**

ಭಾರತೀಯ ಸಂಸ್ಕೃತಿಯಲ್ಲಿ ಧರ್ಮಕ್ಕೆ ಮಹತ್ವಪೂರ್ಣವಾದ ಸ್ಥಾನವನ್ನು ಕೊಡಲಾಗಿದೆ. ಬೌದ್ಧ ಧರ್ಮ, ಜೈನಧರ್ಮ, ವೈಷ್ಣವ ಧರ್ಮ, – ಈರೀತಿಯಾಗಿ ಭಾರತ ಅನೇಕ ಧರ್ಮಗಳ ತವರೂರಾಗಿದೆ. ಪ್ರತಿಯೊಂದು ಧರ್ಮಕ್ಕೂ ತನ್ನದೇ ಆದ ಕಥೆಯಿದೆ, ತನ್ನದೇ ಆದ ಇತಿಹಾಸವಿದೆ. ಜನಗಳ ಬದುಕಿನ ಎಲ್ಲಾ ಮಜಲುಗಳನ್ನು ಪರಿವರ್ತಿಸಬಲ್ಲಂತಹ ಶಕ್ತಿಯನ್ನು ಧರ್ಮ ಪಡೆದುಕೊಂಡಿದೆ.

ದಕ್ಷಿಣಭಾರತದಲ್ಲಿ ಪ್ರಮುಖವಾಗಿ – ಹಿಂದೆ ಆಚರಣೆಯಲ್ಲಿ ಇದ್ದ, ಇಂದಿಗೂ ಆಚರಣೆಯಲ್ಲಿರುವ ಧರ್ಮವೆಂದರೆ ವೈಷ್ಣವ ಧರ್ಮವೆಂದೇ ಹೇಳಬೇಕು. ವೈಷ್ಣವಧರ್ಮ ಇಂದು ನಿನ್ನೆಯದಲ್ಲ, ಬಹಳಷ್ಟು ಪ್ರಾಚೀನವಾದುದು. ವೈಷ್ಣವ ಧರ್ಮದ ಇತಿಹಾಸವನ್ನು ತಿಳಿಯುವುದು ಕುತೂಹಲಕಾರಿಯಾದ ಅಂಶವಾಗಬಲ್ಲದು.

ವೈಷ್ಣವಧರ್ಮದಲ್ಲಿ ವಿಷ್ಣುವಿನ ಆರಾಧನೆಯೇ ಮುಖ್ಯವಾದುದು.

'ಋಗ್ವೇದ'ದಲ್ಲಿ ವಿಷ್ಣುವಿನ ಉಲ್ಲೇಖವಿದ್ದರೂ ಸಹ ವಿಷ್ಣುವಿಗೆ ಪ್ರಧಾನವಾದ ಸ್ಥಾನ ಸಿಕ್ಕಿದುದು ಬ್ರಾಹ್ಮಣಗಳ ಕಾಲದಲ್ಲಿ ಎಂದು ಹೇಳಬಹುದು. ಐತರೇಯ ಬ್ರಾಹ್ಮಣದಲ್ಲಿ ವಿಷ್ಣು ವರಿಷ್ಠದೇವತೆಯಾಗಿದ್ದಾನಂತೆ. ವಾಯುಪುರಾಣದಲ್ಲಿ ರಾಮನನ್ನು ವಿಷ್ಣುವಿನ ಅವತಾರವೆಂದು ಪರಿಗಣಿಸಲಾಗಿದೆ. ನಂತರದ ಇತಿಹಾಸದಲ್ಲಿಯೂ, ಮಹಾಕಾವ್ಯಗಳಲ್ಲಿಯೂ ವಿಷ್ಣುವಿಗೆ ಮಹತ್ತರವಾದ ಸ್ಥಾನ ದೊರಕಿತು. ಮಹಾಕಾವ್ಯಗಳು ವಿಷ್ಣುವಿನದೇ ರೂಪಗಳಾದ ರಾಮ–ಕೃಷ್ಣರನ್ನು ನಾಯಕರನ್ನಾಗಿ ಮಾಡಿಕೊಂಡು ಸಮಕಾಲೀನ ಇತಿಹಾಸವನ್ನೆಲ್ಲಾ ಚಿತ್ರಿಸಿದವು.

ವೈದಿಕಧರ್ಮದೊಡನೆಯೇ ಜೊತೆಗೂಡಿಕೊಂಡು ಬಂದ ಭಾಗವತ ಧರ್ಮದಲ್ಲಿ ಒಬ್ಬನೇ ದೇವರನ್ನು ಪೂಜಿಸುವುದನ್ನು ಕಾಣಬಹುದು. ಇದರಿಂದ ಭಾಗವತಧರ್ಮಕ್ಕೆ 'ಏಕಾಂತಿಕಧರ್ಮ'ವೆಂಬ ಹೆಸರೂ ಇದೆ. ಅಲ್ಲದೆ ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಸತ್ವತನೆಂಬುವನ ವಂಶಜರು ಭಾಗವತ ಧರ್ಮದ ಅನುಯಾಯಿಗಳಾಗಿದ್ದುದರಿಂದ ಇದಕ್ಕೆ ಸಾತ್ವತಧರ್ಮ ಎಂಬ ಹೆಸರೂ ಬಂದಿತು. ಕೆಲವು ವಿದ್ವಾಂಸರು ಚಿತ್ರಶಿಖಂಡಿ ಮೊದಲಾದ ಋಷಿಗಳು ಭಾಗವತಧರ್ಮವನ್ನು ಸ್ಥಾಪಿಸಿದವರು ಎಂದು ಹೇಳುತ್ತಾರೆ ಆದರೆ ಮತ್ತೆ ಕೆಲವರು ಭಾಗವತ ಧರ್ಮದ ಸ್ಥಾಪಕ 'ಶಾಂಡಿಲ್ಯ' ಎನ್ನುತ್ತಾರೆ. ಭಾಗವತಧರ್ಮವೇ ವೈಷ್ಣವಧರ್ಮ. ಹೀಗೆ ಭಾಗವತ ಧರ್ಮಕ್ಕೆ ವೈಷ್ಣವ ಧರ್ಮ ಎಂಬ ಹೆಸರು ಬಂದುದು ರೋಚಕವಾದ ವಿಷಯವಾಗಿದೆ

"ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ" ಎಂಬ ಪುಸ್ತಕದಲ್ಲಿರುವ ವೈಷ್ಣವಧರ್ಮದ ವಿಚಾರವನ್ನು ಹೀಗೆ ಸಂಗ್ರಹಿಸಬಹುದು.

"ಭಗವಂತನು ಸಗುಣನೆಂದು ಭಾವಿಸಿ, ಅವನ ಪ್ರತೀಕೋಪಾಸನೆಯನ್ನು ಮಾಡುವುದು ಇದರ (ವೈಷ್ಣವಧರ್ಮದ) ಮುಖ್ಯ ಲಕ್ಷಣ. ವಿಷ್ಣುವಿನ ಹತ್ತು ಅವತಾರಗಳಲ್ಲಿ ಯಾವುದನ್ನೇ ಪೂಜಿಸಲಿ ಈ ಧರ್ಮವು ಮುಖ್ಯವಾಗಿ ಏಕದೇವೋಪಾಸನೆಯನ್ನು ಎತ್ತಿ ಹಿಡಿಯುತ್ತದೆ. ಈ ಇಷ್ಟದೈವದ ಪ್ರಸಾದ ಅಥವಾ ಕರುಣೆಗಾಗಿ ತನ್ನನ್ನು ತಾನು ಭಗವಂತನಿಗೆ ಸಂಪೂರ್ಣವಾಗಿ ಸಮರ್ಪಿಸಿಕೊಳ್ಳಬೇಕು. (ಇದೇ ಪ್ರಪತ್ತಿ.) ವಿಷ್ಣುವಿಗಿಂತ ಕೆಳಮಟ್ಟದಲ್ಲಿದ್ದರೂ ಬೇರೆ ಬೇರೆ ಸಾಮರ್ಥ್ಯಗಳನ್ನು ಪಡೆದು ಬೇರೆ ಬೇರೆ ಕರ್ತವ್ಯಗಳನ್ನು ಹೊತ್ತಿರುವ ಬ್ರಹ್ಮ, ಶಿವ ಮುಂತಾದ ಅಸಂಖ್ಯಾತ ದೇವತೆಗಳಿಗೆ ಈ ಧರ್ಮವು ಗೌರವವನ್ನು ತೋರಿಸುತ್ತದೆ. ಭಗವಂತನು ಈ ಲೋಕವನ್ನು ಸೃಷ್ಟಿಸಿರ.ವಂತೆಯೇ ಅದರ ಉದ್ಧಾರಕ್ಕಾಗಿ ಆಗಾಗ ಅವತರಿಸುತ್ತಾನೆಂದು ಅದು ನಂಬುತ್ತದೆ. ಮೋಕ್ಷದಲ್ಲಿ ಬೇರೆಬೇರೆ ಹಂತಗಳುಂಟೆಂದೂ, ಸಾಧಕನಿಗೆ ಗುರು ಅತ್ಯವಶ್ಯಕವೆಂದೂ, ಭಗವಂತನ ನಾಮೋಚ್ಚಾರಣೆಗೆ ಅದ್ಭುತವಾದ ಶಕ್ತಿಯಿದೆಯೆಂದೂ ಅದು ನಂಬುತ್ತದೆ. ಬೌದ್ಧಿಕವಾದ ಜ್ಞಾನಕ್ಕಿಂತಲೂ ಭಾವರೂಪವಾದ ಭಕ್ತಿಯೇ ಶ್ರೇಷ್ಠವೆಂದು ವೈಷ್ಣವಧರ್ಮವು ಒತ್ತಿ ಹೇಳುತ್ತದೆ."

ದಕ್ಷಿಣಭಾರತದಲ್ಲಿ ವೈಷ್ಣವಧರ್ಮದ ಪ್ರಚಾರವನ್ನು ಮಾಡಿದವರಲ್ಲಿ ಮುಖ್ಯರಾದವರೆಂದರೆ ಆಳ್ವಾರರು. ಆಳ್ವಾರರನ್ನು ವೈಷ್ಣವಧರ್ಮದ ಮೂಲಸ್ತಂಭಗಳೆಂದು ಕರೆಯಬಹುದು. ಆಳ್ವಾರರು ಭಗವಂತನಾದ ವಿಷ್ಣುವಿನ ಮಹಾಭಕ್ತರು. ಪೊಯ್‌ಗೈ ಆಳ್ವಾರ್, ಭೂದತ್ತಾಳ್ವಾರ್, ತಿರುಮಳಿಶೈಯಾಳ್ವಾರ್, ಪೇಯಾಳ್ವಾರ್, ನಮ್ಮಾಳ್ವಾರ್, ಮಧುರಕವಿಯಾಳ್ವಾರ್, ಕುಲಶೇಖರಾಳ್ವಾರ್, ಪೆರಿಯಾಳ್ವಾರ್, ಶೂಡಿಕುಡುತ್ತನಾಚ್ಚಿಯಾರ್, ತೊಂಡರಡಿಪ್ಪೊಡಿಯಾಳ್ವಾರ್, ತಿರುಪ್ಪಾಣಿ ಆಳ್ವಾರ್, ತಿರುಮಂಗೈ ಆಳ್ವಾರ್— ಈ ಹನ್ನೆರಡು ಜನ ಆಳ್ವಾರರೇ ವೈಷ್ಣವಧರ್ಮದ ಪ್ರಚಾರಕ್ಕೆ ಕಾರಣಕರ್ತರಾದವರು. ಮಧುರವಾಗಿ ಹಾಡುಗಳನ್ನು ಹಾಡುತ್ತಾ ವಿಷ್ಣುಭಕ್ತಿಯ ಪ್ರಚಾರವನ್ನು ಇವರು ಮಾಡಿದರು. ಇವರ ಹಾಡುಗಳನ್ನು ಪ್ರಬಂಧಗಳೆಂದು ಕರೆಯುತ್ತಾರೆ. ಈ ಹಾಡುಗಳ ಸಂಖ್ಯೆ ನಾಲ್ಕು ಸಾವಿರ. ಅನೇಕ ದಿನಗಳ ನಂತರ ನಾಥಮುನಿ, ಯಾಮುನಾಚಾರ್ಯರಿಂದ ಪ್ರವರ್ಧಮಾನಗೊಂಡ ವೈಷ್ಣವ ಧರ್ಮವು ತನ್ನ ಉನ್ನತಿಯನ್ನು ಮುಟ್ಟಿದುದು ರಾಮಾನುಜಾಚಾರ್ಯರ ಕಾಲದಲ್ಲಿ ಎನ್ನಬಹುದು. ರಾಮಾನುಜಾಚಾರ್ಯರು ವೈಷ್ಣವ ಧರ್ಮವನ್ನು ಸುವ್ಯವಸ್ಥಿತಗೊಳಿಸಿ ಇಂದಿಗೂ ಅದು ಉಳಿದುಕೊಂಡು ಬರುವಂತೆ ಮಾಡಿದ ಮಹಾನುಭಾವರು.

ಚಾರಿತ್ರಿಕ ದೃಷ್ಟಿಯಿಂದ ನೋಡಿದಾಗ ಇತಿಹಾಸದಲ್ಲಿ ವೈಷ್ಣವಧರ್ಮ ಪಡೆದುಕೊಂಡಿರುವ ಸ್ಥಾನವನ್ನು ಗುರುತಿಸಬಹುದು. ವೈಷ್ಣವಧರ್ಮಕ್ಕೆ ಕರ್ನಾಟಕದಲ್ಲಿ ಸಾಕಷ್ಟು ಆಶ್ರಮ ದೊರೆಯಿತು. ಕರ್ನಾಟಕದಲ್ಲಿನ ರಾಜರು ತು[illegible]ದಿಂದ ವೈಷ್ಣವಧರ್ಮವನ್ನು ಪ್ರೋತ್ಸಾಹಿಸಿದರು. [illegible]ರಲ್ಲಿಯೂ ಮುಖ್ಯವಾಗಿ ಹೊಯ್ಸಳ ರಾಜರು, ವಿಜಯನಗರದ ಅರಸರು ಹಾಗು ಮೈಸೂರಿನ ಒಡೆಯರು ವೈಷ್ಣವಧರ್ಮ ನಶಿಸಿಹೋಗದಂತೆ ಕಾಪಾಡಿಕೊಂಡು ಬರುವಲ್ಲಿ ಶ್ರಮಿಸಿದ ಉದಾತ್ತರಾಗಿದ್ದರು.

ಕರ್ನಾಟಕದಲ್ಲಿ ವೈಷ್ಣವಧರ್ಮದ ಕುರುಹುಗಳನ್ನು ಕದಂಬರ ಕಾಲದಿಂದಲೇ ಗುರುತಿ[illegible]ಬಹುದು. ಕೃಷ್ಣವರ್ಮ, ರಘು, ಕಾಕುತ್ಸವರ್ಮ ಇವೇ [illegible]

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಅರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಅರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ರಾಜರು ಇಟ್ಟುಕೊಳ್ಳುತ್ತಿದ್ದರು. ಹೀಗಾಗಿ ಕದಂಬರು ವೈಷ್ಣವಪಂಥದಲ್ಲಿ ಶ್ರದ್ಧೆಯನ್ನು ಹೊಂದಿದ್ದರೆಂಬುದನ್ನು ಕಾಣಬಹುದು. ಕ್ರಿ.ಶ. 450ರ ಕದಂಬ ಕಾಕುಸ್ಥವರ್ಮನ ಹಲ್ಮಿಡಿ ಶಾಸನದಲ್ಲಿರುವ ಪ್ರಾರ್ಥನಾಪದ್ಯವು ವಿಷ್ಣುವನ್ನು ಕುರಿತದ್ದಾಗಿದೆ. ಇದು ಕದಂಬರಿಗಿದ್ದ ವೈಷ್ಣವ ಧರ್ಮದ ಅಭಿಮಾನವನ್ನು ಸೂಚಿಸುವಲ್ಲಿ ಸಹಾಯಕವಾಗಿದೆ. ಈ ಶಾಸನದಲ್ಲಿನ ಶ್ಲೋಕ-ಲಕ್ಷ್ಮಿಯಿಂದ ಆಲಿಂಗಿತನಾಗಿರುವ ವಿಷ್ಣುವು ದಾನವರ ಕಣ್ಣುಗಳಿಗೆ ಪ್ರಳಯಕಾಲದ ಅಗ್ನಿಯಂತಿರುವನು ಎಂಬುದನ್ನು ಹೇಳುತ್ತದೆ. ಶ್ಲೋಕ ಈ ರೀತಿಯಾಗಿದೆ ;

"ಜಯತಿ ಶ್ರೀಪರಿಷ್ವಂಗ ಶಾರ್ಙ್ಗ
(ವ್ಯಾನತಿ) ರಚ್ಯುತಃ ।
ದಾನವಾಕ್ಷ್ಣೋರ್ಯುಗಾಂತಾಗ್ನಿಃ
(ಶಿಷ್ಟಾನಾನ್ತು) ಸುದರ್ಶನಃ ॥"

ಕರ್ನಾಟಕದ ರಾಜಮನೆತನಗಳಲ್ಲಿ ಪ್ರಮುಖವಾದ ರಾಜಮನೆತನವೆಂದರೆ ತ ಳ ಕಾ ಡಿ ನ ಗಂಗರದು. ಗಂಗರಸರು ಜೈನಧರ್ಮದ ಅವಲಂಬಿಗಳಾಗಿ ಇದ್ದರೂ ವೈಷ್ಣವಧರ್ಮದ ಬಗೆಗೆ ಅಪಾರವಾದ ಅಭಿಮಾನವನ್ನು ಹೊಂದಿದವರಾಗಿದ್ದರು. ಗಂಗರಸರು ಶೈವದೇವಾಲಯಗಳ ಜೊತೆಯಲ್ಲಿಯೇ ವಿಷ್ಣುವಿನ ದೇವಾಲಯವನ್ನು ಕಟ್ಟಿಸುತ್ತಿದ್ದರೆಂದು ವಿದ್ವಾಂಸರೊಬ್ಬರು ಅಭಿಪ್ರಾಯ ಪಡುತ್ತಾರೆ. ಗಂಗರ ಸುಮಾರು ಶಾಸನಗಳಲ್ಲಿ ಪ್ರಾರಂಭದಲ್ಲಿ ಈ ಸ್ತುತಿಯಿರುತ್ತದೆ.

"ಸ್ವಸ್ತಿ ಜಿತಮ್ಭಗವತಾಗತ ಘನಗಗನಾಭೇನ
ಪದ್ಮನಾಭೇನ..."

ಪದ್ಮನಾಭನ ಮೂಲಕ ಜಯ ಲಭಿಸಲಿ. ಮೋಡಗಳಿಲ್ಲದ ಆಕಾಶದ ಬಣ್ಣವನ್ನು ಪದ್ಮನಾಭ ಹೊಂದಿರುವನಂತೆ. ಜೈನ ಧರ್ಮೀಯರಾದರೂ ಶಾಸನದ ಪ್ರಾರಂಭದಲ್ಲಿ ವಿಷ್ಣುವನ್ನು ನೆನೆದಿರುವ ಅಂಶ ಗಮನಾರ್ಹವಾದುದಾಗಿದೆ. ಗಂಗ ದೊರೆಯಾದ ಶ್ರೀಪುರುಷನು "ನಾರಾಯಣಚರಣಾನುಧ್ಯಾತ"ನಾಗಿದ್ದನಂತೆ. ದೊರೆ ಇಮ್ಮಡಿ ಶಿವಮಾರನಿಂದ (ವಿಷ್ಣು) ದೇವಸ್ಥಾನದ ಪಾರುಪತ್ತೇಗಾರನೊಬ್ಬನು ದಾನವನ್ನು ಪಡೆದನಂತೆ. ಜೈನಧರ್ಮೀಯರಾದ ಗಂಗರಸರು ವೈಷ್ಣವಧರ್ಮದ ಬಗೆಗೆ ಅಸಹನೆಯನ್ನು ತೋರಿಸದೆ ಸೌಹಾರ್ದದಿಂದ ನಡೆದುಕೊಂಡುದು ಮೆಚ್ಚತಕ್ಕ ವಿಚಾರವಾಗಿದೆ.

ಬಾದಾಮಿಯ ಚಾಲುಕ್ಯರು ವಿಷ್ಣುವಿನ ಅವತಾರವಾದ 'ವರಾಹ'ದ ಚಿಹ್ನೆಯನ್ನು ಮುದ್ರೆಗಳ ಮೇಲೆ ಹಾಕಿಸಿಕೊಂಡಿದ್ದವರು. ವಿಷ್ಣು ಬಾದಾಮಿಯ ಚಾಲುಕ್ಯರ ಕುಲದೇವತೆಯಾಗಿರಬಹುದೆಂದು ಊಹಿಸಲು ಅವಕಾಶಗಳಿವೆ.

ವರಾಹವನ್ನು ಸ್ತುತಿಸುವ ಪ್ರಾರ್ಥನಾರೂಪದ ಪದ್ಯಗಳು ಬಾದಾಮಿಯ ಚಾಲುಕ್ಯರ ಶಾಸನ, ತಾಮ್ರಪಟಗಳಲ್ಲಿರುವುದು ಇದಕ್ಕೆ ಸಾಕ್ಷಿಯಾಗಿದೆ.

"ಜಯತಿ ಆವಿಷ್ಕೃತಂ ವಿಷ್ಣೋಃ
ವಾರಾಹಂ ಕ್ಷೋಭಿತಾರ್ಣವಂ ।
ದಕ್ಷಿಣೋನ್ನತ ದಂಷ್ಟ್ರಾಗ್ರೇ
ವಿಶ್ರಾಂತ ಭುವನಂ ವಪುಃ ॥"

ಪರಮಭಾಗವತ, ಶ್ರೀವಲ್ಲಭ, ಪೃಥ್ವೀವಲ್ಲಭ, ಬಿರುದುಗಳು ಬಾದಾಮಿ ಚಾಲುಕ್ಯರಿಗೆ ವೈಷ್ಣವ ಧರ್ಮದಲ್ಲಿದ್ದ ಅಭಿಮಾನವನ್ನು ಸೂಚಿಸುತ್ತವೆ. ಚಾಲುಕ್ಯ ದೊರೆಯಾದ 'ಮಂಗಳೇಶನು' ಪರಮ ಭಾಗವತನಾಗಿದ್ದನು. ಅವನು ಬಾದಾಮಿಯಲ್ಲಿ ಸುಪ್ರಸಿದ್ಧವಾದ ವೈಷ್ಣವಮಹಾದೇವಾಲಯವನ್ನು ಕಟ್ಟಿಸಿದನು. ವೈಷ್ಣವಧರ್ಮಕ್ಕೆ ಸಂಬಂಧಪಟ್ಟಂತಹ ಅನೇಕ ಶಿಲ್ಪಗಳು, ಮೂರ್ತಿಗಳು, ಬಾದಾಮಿಯಲ್ಲಿ ದೊರೆಯುತ್ತವೆ. 'ಬಾದಾಮಿಯ ಚಾಲುಕ್ಯರು ಹಾಗು ವೈಷ್ಣವಧರ್ಮ' ಎಂಬ ವಿಷಯದ ಬಗೆಗೆ ಹೆಚ್ಚಿನ ಸಂಶೋಧನೆಗಳಾಗಲು ಅವಕಾಶವಿದೆ.

'ಕರ್ಣಾಟಕದ ಪರಂಪರೆ' (ಭಾಗ–1) ಎಂಬ ಪುಸ್ತಕದಲ್ಲಿ ಫ್ಲೀಟ್ ಅವರು ಹೇಳಿರುವ ಕೆಲವು ಮಾತುಗಳು ಬಾದಾಮಿಚಾಲುಕ್ಯರು ಮತ್ತು ವೈಷ್ಣವಧರ್ಮದ ಬಗೆಗಿನ ಅವರ ಸಂಬಂಧವನ್ನು ಸೂಚಿಸುವಲ್ಲಿ ನೆರವಾಗುತ್ತದೆ.

ಚಾಲುಕ್ಯರ ಕುಲದೇವತೆ ವಿಷ್ಣು; ಅವರ (ಚಾಲುಕ್ಯರ) ಶಾಸನಗಳ ಮತ್ತು ನಾಣ್ಯಗಳ ಮೇಲಿನ ಪ್ರಮುಖ ಮುದ್ರೆ ಯಾವಾಗಲೂ ವಿಷ್ಣುವಿನ ಅವತಾರವಾದ ವರಾಹವಾಗಿದ್ದಿತು. ಅನಂತರ ಬಂದವರು ಮಾತ್ರ ಶಿವಭಕ್ತರಾದರು. ಇದರಿಂದ ಬಾದಾಮಿ ಚಾಲುಕ್ಯದೊರೆಗಳು ವೈಷ್ಣವ ಧರ್ಮಕ್ಕೆ ಪ್ರೋತ್ಸಾಹ ನೀಡಿದ್ದ ವಿಚಾರ ಸ್ಪಷ್ಟವಾಗುತ್ತದೆ.

ರಾಷ್ಟ್ರಕೂಟ ದೊರೆಗಳು ಇತರ ಧರ್ಮಗಳ, ಅವಲಂಬಿಗಳಾದರೂ ವೈಷ್ಣವಧರ್ಮಕ್ಕೂ ಪ್ರೋತ್ಸಾಹ ನೀಡಿದವರಾಗಿದ್ದರು. ಸುಪ್ರಸಿದ್ಧ ರಾಷ್ಟ್ರಕೂಟ ದೊರೆಯಾದ ಅಮೋಘ ವರ್ಷ ನೃಪತುಂಗನು ಮಹಾಲಕ್ಷ್ಮಿಯ ಭಕ್ತನಾಗಿದ್ದ. ಅಷ್ಟೇ ಅಲ್ಲದೆ ಆತ ಲೋಕೋಪಕಾರಕ್ಕಾಗಿ ಮಹಾಲಕ್ಷ್ಮಿಗೆ ತನ್ನ ಬೆರಳನ್ನೇ ಬಲಿಕೊಟ್ಟ ಧೀರ. ಮಹಾಲಕ್ಷ್ಮಿ ವೈಷ್ಣವರ ಪೂಜಾದೇವತೆ. ನೃಪತುಂಗ ಮಹಾರಾಜನು ಜೈನನಾದರೂ ಮಹಾಲಕ್ಷ್ಮಿಯ ಭಕ್ತನಾಗಿದ್ದನೆಂಬ ವಿಚಾರವು ಸಂಜನ ಶಾಸನದಿಂದ ತಿಳಿದುಬರುತ್ತದೆ.

ಕಲ್ಯಾಣದ ಚಾಲುಕ್ಯದೊರೆಗಳು ವೈಷ್ಣವ ಧರ್ಮಕ್ಕೆ ಪ್ರೋತ್ಸಾಹ ನೀಡಿದ ಬಗೆಗೆ ಹಲವು ವಿಚಾರಗಳು ಶಾಸನಗಳಿಂದ ತಿಳಿದುಬರುತ್ತದೆ. 1022ನೇ ಇಸವಿಯ ಬೇಲೂರಿನ ಶಾಸನವು ಮಹಾರಾಣಿ, ಅಕ್ಕಾದೇವಿಯು ಜೈನ ಬೌದ್ಧ, ಅನಂತ (ವೈಷ್ಣವ) ರುದ್ರರಿಗೆ ಸಂಬಂಧಿಸಿದ ವ್ರತಗಳನ್ನು ಆಚರಿಸುತ್ತಿದ್ದಳೆಂದೂ, ಬ್ರಹ್ಮ, ವಿಷ್ಣು ಮಹೇಶ್ವರ ದೇವಾಲಯಗಳನ್ನು ನಿರ್ಮಿಸಿದ ಉದಾತ್ತೆಯೆಂದೂ ವರ್ಣಿಸಿದೆ. ಕಲ್ಯಾಣಿ ಚಾಲುಕ್ಯರು ವೈಷ್ಣವ ಧರ್ಮಕ್ಕೆ ನೀಡಿದ ಪ್ರೋತ್ಸಾಹದ ವಿಚಾರವಾಗಿ ಇನ್ನೂ ಅನೇಕ ವಿಷಯಗಳು ನಿಗೂಢವಾಗಿವೆ. ಲಕ್ಕುಂಡಿ ಶಾಸನದಲ್ಲಿರುವಂತೆ, ಲಕ್ಕುಂಡಿಯ ಮಹಾಜನರು "ವೈಷ್ಣವಗೀತಿ ಮನೋಹರರ್" ಆಗಿದ್ದರು.



ಹೊಯ್ಸಳ ರಾಜಮನೆತನದ ಕಾಲದಲ್ಲಿ ವೈಷ್ಣವ ಧರ್ಮಕ್ಕೆ ಸಿಕ್ಕಷ್ಟು, ಪ್ರೋತ್ಸಾಹ ಪ್ರೇರಣೆ ಇನ್ನು ಯಾವ ರಾಜಮನೆತನಗಳ ಕಾಲದಲ್ಲಿಯೂ ಸಿಕ್ಕಲಿಲ್ಲ ಎಂದು ಹೇಳಿದರೆ ಅದು ಅತಿಶಯವಾದ ವಿಚಾರವಾಗುವುದಿಲ್ಲ. ಪ್ರಸಿದ್ಧ ದೊರೆಯಾದ ಬಿಟ್ಟಿದೇವನು ಜೈನಧರ್ಮವನ್ನು ತ್ಯಜಿಸಿ ವೈಷ್ಣವಧರ್ಮವನ್ನು ಸ್ವೀಕರಿಸಿ ವಿಷ್ಣುವರ್ಧನನೆಂಬ ಹೆಸರನ್ನು ಪಡೆದ. ಅವನ ರಾಣಿಯೊಬ್ಬಳು ವೈಷ್ಣ[illegible]ಳು. ವೈಷ್ಣವ ಧರ್ಮಕ್ಕೆ ಅಪಾರವಾದ ನೆರವನ್ನು ನೀಡಿದ್ದು ದೊರೆಯು ಅನೇಕ ವಿಷ್ಣುವಿನ ಮಂದಿರಗಳನ್ನು ಕಟ್ಟಿಸಿದ. ಅವುಗಳಲ್ಲಿ ಪ್ರಮುಖವಾದುವೆಂದರೆ ಬೇಲೂರು, ತಲಕಾಡು ಮೊದಲಾದ ಊರುಗಳಲ್ಲಿರುವ ವಿಷ್ಣುವಿನ ದೇವಾಲಯಗಳು. ದೊರೆಯು ಅನೇಕ ವೈಷ್ಣವರಿಗೆ ದಾನಗಳನ್ನೂ ದತ್ತಿಗಳನ್ನು ನೀಡಿದ ಉದಾರಿ ವೈಷ್ಣವಧರ್ಮಕ್ಕೆ ದಕ್ಷಿಣ ಭಾರತದಲ್ಲಿ ಅಪಾಯ ಬಂದಾಗ ಅದನ್ನು ಆದರಿಸಿ ರಕ್ಷಿಸಿ ವೈಷ್ಣವ ಆಚಾರ್ಯರುಗಳಿಗೆ ಭರವಸೆಯನ್ನು ನೀಡಿದವನು ಕರ್ನಾಟಕದ ವಿಷ್ಣುವರ್ಧನ. ವಿಷ್ಣುವರ್ಧನನ ಆಶ್ರಯವನ್ನು ಪಡೆದ ಶ್ರೀರಾಮಾನುಜಾಚಾರ್ಯರು ಯಾದವಗಿರಿಯಲ್ಲಿ ನೆಲಸಿ ವೈಷ್ಣವಧರ್ಮದ ತತ್ವಗಳನ್ನು ಪ್ರಚಾರಮಾಡುವಲ್ಲಿ ಸಮರ್ಥರಾದರು. ಹೊಯ್ಸಳರಾಜನಾದ ವಿಷ್ಣುವರ್ಧನ ವೈಷ್ಣವನಾದನೆಂದ ಮಾತ್ರಕ್ಕೆ ಇತರ ಧರ್ಮಗಳನ್ನು ಕಡೆಗಣಿಸಿದನೆಂದಲ್ಲ. ಇತರ ಧರ್ಮಗಳನ್ನು ವೈಷ್ಣವಧರ್ಮದಷ್ಟೇ ಸಮಾನವಾದ ದೃಷ್ಟಿಯಿಂದ ನೋಡುವ ಗುಣ ವಿಷ್ಣುವರ್ಧನನದಾಗಿದ್ದಿತು.

ಬೇಲೂರಿನ ಅನೇಕ ಶಾಸನಗಳು ವಿಷ್ಣುವರ್ಧನನನ್ನು ಬಗೆಬಗೆಯಾಗಿ ಬಣ್ಣಿಸಿವೆ. ಶಾಸನವೊಂದು ವಿಷ್ಣುವಿನ ಹನ್ನೊಂದನೇ ಅವತಾರವೇ (ಏಕಾದಶಾವತಾರಾನ್) ಈ ವಿಷ್ಣುವರ್ಧನ ಎಂದು ಭಾವಾವೇಶದಿಂದ ದೊರೆಯನ್ನು ಹೊಗಳಿದೆ. ದೊರೆ ವಿಷ್ಣುವರ್ಧನನು ಜೈನ, ಶೈವಧರ್ಮಗಳನ್ನು ಸಮಮಾನವಾಗಿ ಕಾಣುತ್ತಿದ್ದ ವಿಷಯ ಶಾಸನಗಳಲ್ಲಿರುವುದನ್ನು ಕಾಣಬಹುದು. ಸ್ವತಃ ವಿಷ್ಣುವರ್ಧನನ ಪತ್ನಿಯಾದ ಮಹಾರಾಣಿ ಶಾಂತಲಾದೇವಿಯು ಜೈನಳಾಗಿದ್ದಳು. ಬೇಲೂರಿನ ಶಾಸನವೊಂದರಲ್ಲಿರುವ ಪದ್ಯದಿಂದ ಹೊಯ್ಸಳರ ಕಾಲದಲ್ಲಿದ್ದ ಧರ್ಮಸಹಿಷ್ಣುತೆಯ ವಿಚಾರ ಗೊತ್ತಾಗುತ್ತದೆ ಬೇಲೂರಿನ ಶ್ರೀ ಚೆನ್ನಕೇಶವನು ಎಲ್ಲರ ಇಷ್ಟಾರ್ಥಗಳನ್ನು ಕರುಣಿಸುತ್ತಾನೆ ಎಂಬ ಅರ್ಥವನ್ನು ನೀಡುವ ಈ ಶಾಸನ ಕಾಲಕ್ಕೂ ಮಾದರಿಯಾಗಿ ನಿಲ್ಲಬಲ್ಲಂತಹುದಾಗಿದೆ. ಶಾಸನದ ಪಾಠ ಹೀಗಿದೆ;

"ಯಂ ಶೈವಾಸ್ಸಮುಪಾಸತೇ ಶಿವ ಇತಿ
ಬ್ರಹ್ಮೇತಿ ವೇದಾಂತಿನೋ
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ
ಕರ್ತೇತಿ ನೈಯ್ಯಾಯಿಕಾಃ
ಅರ್ಹಶ್ಚೇತಿ ಹ ಜೈನಶಾಸನಮತಿಃ ಕರ್ಮೇತಿ
ಮೀಮಾಂಸಕಾಃ
ಸೋಯಂ ವೋ ವಿದಧಾತು ವಾಂಛಿತಫಲಂ
ಶ್ರೀ ಕೇಶವೇಶಸ್ಸದಾ ॥

ಮಿಕ್ಕ ಹೊಯ್ಸಳದೊರೆಗಳೂ ವೈಷ್ಣವರಿಗೆ ಅನೇಕ ದಾನ–ದತ್ತಿಗಳನ್ನು ನೀಡಿ ವೈಷ್ಣವ ದೇವಾಲಯಗಳನ್ನು ನಿರ್ಮಿಸುವುದರ ಮೂಲಕ ವೈಷ್ಣವಧರ್ಮವನ್ನು ಪೋಷಿಸಿಕೊಂಡು ಬಂದರು

ಹೊಯ್ಸಳರಂತೆಯೇ ವಿಜಯನಗರದರಸರೂ ವೈಷ್ಣವ ಧರ್ಮವನ್ನು ರಕ್ಷಿಸುವುದರಲ್ಲಿ ಪ್ರಮುಖರಾಗಿದ್ದಾರೆ. ಅದ್ವೈತಿಗಳಾದ ವಿದ್ಯಾ[illegible] ಹರಿಹರನು ಅದ್ವೈತಧರ್ಮದ ಬಗೆಗೆ ಒಲವನ್ನು ತೋರಿಸಿದ್ದು ದಿಟ. ಆದರೆ ಎಂದೂ ಮತಾಂಧನಾಗಿರಲಿಲ್ಲ. ಅವನು ಇತರ ಮತಗಳನ್ನು ಗೌರವದಿಂದ ಕಾಣುವಂತಹ ಅರಸನಾಗಿದ್ದ. ಅವನಂತೆಯೇ ಬುಕ್ಕರಾಯನೂ ಪರಮತ ಸಹಿಷ್ಣುತೆಗೆ

ಹೆಸರುವಾಸಿಯಾಗಿದ್ದ. ಬುಕ್ಕರಾಯನ ಆಳ್ವಿಕೆಯ ಕಾಲದಲ್ಲೊಮ್ಮೆ ಜೈನರಿಗೂ ವೈಷ್ಣವರಿಗೂ ವಿವಾದವು ಹುಟ್ಟಿತು. ಎರಡೂ ಪಂಗಡದವರೂ ನ್ಯಾಯಕ್ಕಾಗಿ ದೊರೆಯ ಬಳಿಗೆ ಬಂದರು. ಎರಡೂ ಪಕ್ಷದ ವಾದಗಳನ್ನು ಆಲಿಸಿದ ದೊರೆಯು ಸೌಹಾರ್ದತೆಯಿಂದ ಎರಡೂ ಪಂಗಡಗಳವರಿಗೂ ಹಿತವಾಗುವಂತಹ ತೀರ್ಪನ್ನು ನೀಡಿದನು. ಈ ತೀರ್ಪಿನಿಂದ ವಿಜಯನಗರ ಸಾಮ್ರಾಜ್ಯದಲ್ಲಿ ಪ್ರಜೆಗಳೊಡನೆ ಪರಸ್ಪರವಾಗಿ ಹೊಗೆಯಾಡುತ್ತಿದ್ದ ದ್ವೇಷ, ಅಸೂಯೆಗಳು ಕಡಿಮೆಯಾಗಿ ಅವರಲ್ಲಿ ಮೈತ್ರೀಭಾವವು ಮೂಡಿತು.

ಕರ್ನಾಟಕ ರಾಜ್ಯ ರಮಾರಮಣನೆಂದು ಬಿರುದು ಪಡೆದಿದ್ದ ಶ್ರೀಕೃಷ್ಣದೇವರಾಯನು ಸ್ವತಃ ಶ್ರೀ ವೈಷ್ಣವನಾಗಿದ್ದ. ತಿರುಪತಿಯಂತಹ ವೈಷ್ಣವರ ಪ್ರಸಿದ್ಧವಾದ ತೀರ್ಥಕ್ಷೇತ್ರಕ್ಕೆ ಬಂದು ವೆಂಕಟೇಶ್ವರಸ್ವಾಮಿಯ ದರ್ಶನದಿಂದ ಪಾವನನಾದ. ಕೃಷ್ಣದೇವರಾಯ ವೈಷ್ಣವರನ್ನಷ್ಟೇ ಅಲ್ಲ ಎಲ್ಲಾ ಜನಗಳನ್ನು ವಿಶ್ವಾಸದಿಂದ ಕಾಣಬಲ್ಲಂತಹ ಉದಾತ್ತವ್ಯಕ್ತಿಯಾಗಿದ್ದ. ಕ್ರೈಸ್ಟಿಯನ್, ಜ್ಯೂ, ಹಿಂದು ಎಲ್ಲರನ್ನು ಸಮಾನವಾಗಿ ನೋಡಿಕೊಳ್ಳುತ್ತಿದ್ದ. ದೊರೆಯು ಅನೇಕ ವೈಷ್ಣವ ಪಂಡಿತರಿಗೆ ಸಹಾಯ ಮಾಡಿದವನು. ಈ ಕಾಲದಲ್ಲಿ ವೈಷ್ಣವ ಸಾಹಿತ್ಯದ ರಚನೆಯೂ ಭರದಿಂದ ಸಾಗಿತು. ಸ್ವತಃ ಕವಿಯೂ–ಕಲಿಯೂ ಆಗಿದ್ದ ಕೃಷ್ಣದೇವರಾಯನೇ "ಆಮುಕ್ತಮಾಲ್ಯದ" ಎಂಬ ಗ್ರಂಥವನ್ನು ಬರೆದಿದ್ದಾನೆ ಆಮುಕ್ತಮಾಲ್ಯದ 'ಶೂಡಿ ಕೊಡುತ್ತ ನಾಚ್ಚಿಯಾರ್' ಎಂದು ಹೆಸರು ಪಡೆದಿದ್ದ ಆಂಡಾಳಳ ಕಥಾನಕವನ್ನೊಳಗೊಂಡಿದೆ. ರಾಮರಾಯ, ಅಚ್ಯುತರಾಯ ಮೊದಲಾದ ಇತರ ದೊರೆಗಳೂ ವೈಷ್ಣವಧರ್ಮವು ನಶಿಸಿ ಹೋಗದಂತೆ ಕಾಪಾಡಿಕೊಂಡು ಬಂದಿದ್ದರು.

ಇತಿಹಾಸದಲ್ಲಿ ಪರಿವರ್ತನೆಯಾದಂತೆ ಹೊಸ ಘಟ್ಟವೊಂದು ಮೂಡಿತು. ಮೈಸೂರು ಸಂಸ್ಥಾನದ ಅಧಿಪತಿಗಳಾಗಿ ಮೈಸೂರು ಸಿಂಹಾಸನದ ಮೇಲೆ ಒಡೆಯರು ಪಟ್ಟಾಭಿಷಿಕ್ತರಾದರು. ಪ್ರಾಚೀನ ರಾಜಮನೆತನಗಳಾದ ಹೊಯ್ಸಳ ವಿಜಯನಗರಗಳ ಕಾಲದಲ್ಲಿದ್ದ ಎಲ್ಲಾ ತರಹದ ಆಡಳಿತ ಪದ್ಧತಿಯನ್ನು ಒಡೆಯರು ಅಳವಡಿಸಿಕೊಂಡರು. ಹಿಂದಿನ ರಾಜರಂತೆಯೇ ಇವರೂ ಧರ್ಮಗಳಲ್ಲಿ ಭೇದವನ್ನೆಣಿಸುತ್ತಿರಲಿಲ್ಲ. ವೈಷ್ಣವ ಧರ್ಮ ಒಡೆಯರ ಆಳ್ವಿಕೆಯಲ್ಲಿ ನಿರಾತಂಕವಾಗಿ ಪ್ರವರ್ಧಮಾನಕ್ಕೆ ಬರತೊಡಗಿತು. ಒಡೆಯರು ವೈಷ್ಣವಧರ್ಮವನ್ನು ಪ್ರಚುರಗೊಳಿಸುವಲ್ಲಿ ನೆರವಾದರು. ವಿಷ್ಣುವಿನ ಗುಡಿ–ಗುಂಡಾರಗಳು ಈ ಕಾಲದಲ್ಲಿ ಬಹಳಷ್ಟು ನಿರ್ಮಾಣಗೊಂಡವು

ಮದ್ದೂರು, ಮಂಡ್ಯ, ಮೈಸೂರಿನ ಶಾಸನಗಳು ಒಡೆಯರು ಎಂತಹ ದಾನಿಗಳಾಗಿದ್ದರೆಂಬುದನ್ನು ಸ್ಪಷ್ಟಪಡಿಸುತ್ತವೆ. ವೈಷ್ಣವರಿಗಾಗಿ ಅನೇಕ ಅಗ್ರಹಾರಗಳನ್ನು ನಿರ್ಮಿಸಿ ಉದಾರವಾಗಿ ದಾನ ಮಾಡಿದವರು ಮೈಸೂರು ಒಡೆಯರು. ಅಗ್ರಹಾರಗಳೇನು ? ಮನೆ–ಮನೆಗಳನ್ನೆ ಅದರಲ್ಲಿ ವೈಷ್ಣವರಿಗೆ ಜೀವನಪರ್ಯಂತ ಚಿಂತೆಯಿಲ್ಲದೆ ಬಾಳಲು ಬೇಕಾಗುವಂತಹ ಸಮಸ್ತ ಸಾಮಗ್ರಿಗಳನ್ನೂ ತುಂಬಿಸಿ ದಾನವನ್ನು ಮಾಡಿದರು. ಚಿಕ್ಕದೇವರಾಜ ಒಡೆಯರವರ ಕಾಲದಲ್ಲಿಯಂತೂ ವೈಷ್ಣವರಿಗೆ ಸಾಕಷ್ಟು ಉತ್ತೇಜನ ದೊರೆಯಿತು. ಚಿಕ್ಕದೇವರಾಜರ ಅನೇಕ ಆಸ್ಥಾನ ಕವಿಗಳು ವೈಷ್ಣವರಾಗಿದ್ದರು.

ತಿರುಮಲಾರ್ಯ, ಸಿಂಗಿರಾರ್ಯ, ಮೊದಲಾದ ಅನೇಕ ವೈಷ್ಣವ ಕವಿಗಳು ನಿರ್ಮಿಸಿದ ಸಾಹಿತ್ಯ ಕಾಲಕ್ಕೂ ನಿಲ್ಲಬಲ್ಲಂತಹುದಾಗಿದೆ. ವೈಷ್ಣವ ಧರ್ಮದ ಕೊಡುಗೆಯೇ ಈ ಸಾಹಿತ್ಯವೆನ್ನಬಹುದು. ಲೆಕ್ಕವಿಲ್ಲದಷ್ಟು ಜನ ವೈಷ್ಣವಕವಿಗಳು-ಪಂಡಿತರುಗಳಿಗೆ ಒಡೆಯರು ಆಶ್ರಯ ನೀಡಿ ಪ್ರೋತ್ಸಾಹಿಸಿದ್ದನ್ನು ಶಾಸನಗಳು ವರ್ಣಿಸುತ್ತವೆ. ದೇವರಾಜ ಚಾಮರಾಜ, ನರಸರಾಜ, ಮೊದಲಾದ ಇತರ ಒಡೆಯರುಗಳೂ ವೈಷ್ಣವರಿಗೂ, ವೈಷ್ಣವ ಧರ್ಮಕ್ಕೂ ಪ್ರೋತ್ಸಾಹವನ್ನು ನೀಡಿದ್ದರು.

ಹೀಗೆ ಕದಂಬರ ಕಾಲದಿಂದ ಹಿಡಿದು ಮೈಸೂರಿನ ಒಡೆಯರ ಕಾಲದವರೆಗೆ ರಾಜರು ವೈಷ್ಣವ ಧರ್ಮವನ್ನು ಪೋಷಿಸಿ, ರಕ್ಷಿಸಿಕೊಂಡು ಬಂದ ಬಗೆಯನ್ನು ಅರಿಯಬಹುದಾಗಿದೆ. ಪ್ರತಿಯೊಂದು ರಾಜಮನೆತನದವರ ಧರ್ಮ ಸಮನ್ವಯ ಬುದ್ಧಿಯ ಕಾರಣದಿಂದಲೇ ವೈಷ್ಣವಧರ್ಮ ಇಂದಿಗೂ ಪ್ರಚಾರದಲ್ಲಿದೆ.



# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ,

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ. ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ.

### ಆಲಯ ಕಾರ್ಯಕ್ರಮ.

| | | | | |
|---|---|---|---|---|
| ಸುಪ್ರಭಾತ | ಬೆಳಗ್ಗೆ | 5–00 ಗಂಟೆಯಿಂದ | 5–30 | ವರೆಗೆ |
| ಸಹಸ್ರನಾಮಾರ್ಚನೆ | ,, | 5–30 ಗಂಟೆಯಿಂದ | 6–00 | ವರೆಗೆ |
| ಮೊದಲನೆಯ ಗಂಟೆ | ,, | 6–00 ಗಂಟೆಯಿಂದ | 6–30 | ವರೆಗೆ |
| ಸರ್ವದರ್ಶನ | ,, | 6–30 ಗಂಟೆಯಿಂದ ಮಧ್ಯಾಹ್ನ | 1–00 | ವರೆಗೆ |
| ಎರಡನೇ ಗಂಟೆ | ಮಧ್ಯಾಹ್ನ | 1–00 ಗಂಟೆಯಿಂದ | 1–30 | ವರೆಗೆ |
| ಸರ್ವದರ್ಶನ | ,, | 1–30 ರಿಂದ ರಾತ್ರಿ | 7–30 | ವರೆಗೆ |
| ರಾತ್ರಿ ಗಂಟೆ | ರಾತ್ರಿ | 7–00 ರಿಂದ ರಾತ್ರಿ | 8–45 | ವರೆಗೆ |
| ಏಕಾಂತಸೇವೆ, ತೀರ್ಮಾನ | ರಾತ್ರಿ | 8–45 ರಿಂದ ರಾತ್ರಿ | 9–00 | ವರೆಗೆ |

ಗಮನಿಕೆ:– ಶುಕ್ರವಾರಗಳಲ್ಲಿ ಮೇಲಿನ ಕಾರ್ಯಕ್ರಮಗಳಲ್ಲಿ ಬದಲಾವಣೆ ಉಂಟು. ಸಹಸ್ರನಾಮಾರ್ಚನೆಯ ಟಿಕೆಟ್ ಬೆಲೆ 6–50 ರೂ. ಒಂದು ಟಿಕೆಟ್ಟಿಗೆ ನಾಲ್ವರು ಅನುಮತಿಸಲ್ಪಡುತ್ತಾರೆ.

ಸರ್ವದರ್ಶನದ ಸಮಯದಲ್ಲಿ 1–50 ರೂ. ಟಿಕೆಟ್ಟಿನಿಂದ ಭಕ್ತರು ಅಷ್ಟೋತ್ತರ ಅರ್ಚನೆ ನಡೆಸಿಕೊಳ್ಳಬಹುದು.

**ಪೇಷ್ಕಾರ್.**

# ನಿಮ್ಮ ಭವಿಷ್ಯ

ಡಾ॥ ಅರ್ಕಸೋಮಯಾಜಿ.

## ಮೇಷ :

16 ರವರೆಗೆ ಆಗಾಗ ಪ್ರಯಾಣ, ಮಕ್ಕಳಿಂದಾಗಿ ತುಸು ಚಿಂತೆ. ಹೆಂಡತಿಯ ಅಸಮಾಧಾನ ಅಥವಾ ತುಸು ಅನಾರೋಗ್ಯ. ಆಗಾಗ ವಿವಾದ; 4ರ ಮೊದಲು ಸಂತಸದ ಸುದ್ದಿ ಅಥವಾ ಯಶಸ್ಸು. ಒಟ್ಟಿನಲ್ಲಿ ಈ ತಿಂಗಳು ಸಾಧಾರಣ ಸಂತಸ, ಧನಲಾಭ, ಧಾರ್ಮಿಕ ಪ್ರವರ್ತನೆ, ವಸ್ತ್ರಲಾಭ.

ಅಶ್ವಿನಿಯವರಿಗೆ 4 ರ ಬೆಳಗ್ಗೆ, 5 ರ ಮಧ್ಯಾಹ್ನ, 7, 22, 24

ಭರಣಿಯವರಿಗೆ 5, 11, 12, 16, 21, 23, 25,

ಕೃತ್ತಿಕೆ 1ನೇ ಪಾದದವರಿಗೆ 4ರ ಬೆಳಗ್ಗೆ, 5ರ ಮಧ್ಯಾಹ್ನ 7, 11, 15, 22, 24 ಒಳಿತಿನ ದಿನಗಳು.

## ವೃಷಭ :

ಧನಲಾಭ, ಯಶಸ್ಸು, ಶೃಂಗಾರಭಾವ. ಮಕ್ಕಳಿಂದಾಗಿ ತುಸುಚಿಂತೆ, ಹೊಟ್ಟೆನೋವು. ಕೆಟ್ಟ ಸಹವಾಸದ ಬಗ್ಗೆ ಎಚ್ಚರದಿಂದಿರುವುದು ಒಳಿತು. 16 ನಂತರ ಆಗಾಗ ಪ್ರಯಾಣ.

ಕೃತ್ತಿಕೆ 2, 3, 4 ಪಾದದವರಿಗೆ 8 ರ ಮಧ್ಯಾಹ್ನ 9 ರಬೆಳಗ್ಗೆ 13, 17, 24, 26

ರೋಹಿಣಿಯುವರಿಗೆ, 5 ರಮಧ್ಯಾಹ್ನ 6ರ ಬೆಳಗ್ಗೆ 9 ರ ಮಧ್ಯಾಹ್ನ 14, 16, 25,

ಮೃಗಶಿರ 1, 2 ಪಾದಗಳವರಿಗೆ 6 ರ ಮಧ್ಯಾಹ್ನ 7ರ ಬೆಳಗ್ಗೆ, 8ರ ಮಧ್ಯಾಹ್ನ 9 ರ ಬೆಳಗ್ಗೆ, 17, 24, 26
ಒಳಿತಿನ ದಿನಗಳು.

## ಮಿಥುನ :

ಪುತ್ರರಮೂಲಕ ಅಥವಾ ಕುಮಾರ್ಗದಲ್ಲಿ ಧನಲಾಭ, ಹೆಂಡತಿ ಅಥವಾ ಪುತ್ರರೊಡನೆ ವಿವಾದ ಅಥವಾ ಸ್ತ್ರೀಯರ ಮೂಲಕ ತೊಂದರೆ. 16 ರ ಮೊದಲು ಸ್ವಲ್ಪ ಅನಾರೋಗ್ಯ ನಂತರ ಒಳ್ಳೆಯ ಆರೋಗ್ಯ ಹಾಗೂ ಯಶಸ್ಸು. ಆಪ್ತರಿಂದ ಅಥವಾ ಸ್ನೇಹಿತರಿಂದ ಬೇರ್ಪಡೆ. ಒಟ್ಟಿನಲ್ಲಿ ಈ ತಿಂಗಳು ಸಾಧಾರಣ.

ಮೃಗಶಿರ 3, 4 ಪಾದಗಳವರಿಗೆ 18 ರ ಮಧ್ಯಾಹ್ನ, 9ರ ಬೆಳಗ್ಗೆ 10ರ ಮಧ್ಯಾಹ್ನ 15, 21, 26, 28, 29 ರ ಬೆಳಗ್ಗೆ,

ಆರ್ದ್ರಾದವರಿಗೆ 2,6ರ ಮಧ್ಯಾಹ್ನ, 9ರ ಮಧ್ಯಾಹ್ನ, 16, 25,

ಪುನರ್ವಸು 1, 2, 3 ಪಾದದವರಿಗೆ 1, 8ರ ಮಧ್ಯಾಹ್ನ 9ರ ಬೆಳಗ್ಗೆ 10ರ ಮಧ್ಯಾಹ್ನ 15, 19ರ ಬೆಳಗ್ಗೆ 26, 28, 29 ರ ಬೆಳಗ್ಗೆ ಒಳಿತಿನ ದಿನಗಳು.

## ಕರ್ಕಾಟಕ :

ಗೃಹವಸ್ತು ಸಮೃದ್ಧಿ. ತುಸು ಅನಾರೋಗ್ಯ ಅಥವಾ ಬಂಧುಗಳ ಮೂಲಕ ತುಸು ಚಿಂತೆ. ಹೊಸ ಉಡುಪು. ಮನೆಯಲ್ಲಿ ಕಳ್ಳತನವಾಗಬಹುದು. ಕುಜನರು ತೊಂದರೆ ನೀಡಲು ಯತ್ನಿಸುವರು. ಏನೇ ಆದರೂ ಉತ್ಸಾಹದಿಂದ ಕಾರ್ಯಶೀಲರಾಗಿ ನಡೆಯುವ ತಿಂಗಳು. ಆಗಾಗ ಪ್ರಯಾಣ ಸೂಚಿತ.

ಪುನರ್ವಸು 4ನೇ ಪಾದದವರಿಗೆ 1, 3ರ ಮಧ್ಯಾಹ್ನ, 5, 6ರಬೆಳಗ್ಗೆ, 10ರ ಮಧ್ಯಾಹ್ನ 14ರ ಬೆಳಗ್ಗೆ 17, 22, 28ರ ಮಧ್ಯಾಹ್ನ, 29ರ ಬೆಳಗ್ಗೆ

ಪುಷ್ಯಮಿಯವರಿಗೆ 4ರ ಮಧ್ಯಾಹ್ನ, 5ರ ಬೆಳಗ್ಗೆ 13, 22,

ಆಶ್ಲೇಷದವರಿಗೆ 1, 3, 10 ರಮಧ್ಯಾಹ್ನ 11ರ ಬೆಳಗ್ಗೆ 17, 26, 28ರ ಮಧ್ಯಾಹ್ನ ಒಳಿತಿನ ದಿನಗಳು.

## ಸಿಂಹ :

ಸುಸ್ನೇಹ, ಬಂಧುಗಳ ಆಗಮನ, ಹಿರಿಯರ ಪ್ರಶಂಸೆ. ಸ್ನೇಹಿತರಿಂದಾಗಿ ದುಷ್ಪ್ರವರ್ತನೆ. 16 ರಮುನ್ನ ಒಳಿತಿನ ಕಾಲ. ನಂತರ ತುಸು ಅನಾರೋಗ್ಯ, ಅನಗತ್ಯವೆಚ್ಚ.

ಮಖದವರಿಗೆ 4ರ ಮಧ್ಯಾಹ್ನ, 5ರ ಬೆಳಗೆ 6ರ ಮಧ್ಯಾಹ್ನ, 7ರಬೆಳಗ್ಗೆ 8ರ ಮಧ್ಯಾಹ್ನ, 9ರ ಬೆಳಗ್ಗೆ, 13, 20, 24, 26, 30,

ಪೂರ್ವಫಲ್ಗುಣಿಯವರಿಗೆ 3ಮಧ್ಯಾಹ್ನ, 4ರ ಬೆಳಗ್ಗೆ, 5ರ ಮಧ್ಯಾಹ್ನ, 6ರ ಬೆಳಗ್ಗೆ, 14, 16, 25,

ಉತ್ತರಾ 1ನೇ ಪಾದದವರಿಗೆ 4ರ ಮಧ್ಯಾಹ್ನ, 5ರ ಬೆಳಗ್ಗೆ 6ರ ಮಧ್ಯಾಹ್ನ, 7ರ ಬೆಳಗ್ಗೆ 13, 24,

ಒಳಿತಿನ ದಿನಗಳು.

## ಕನ್ಯಾ :

ಧನಲಾಭ ಹಾಗೂ ಒಳ್ಳೆಯಸ್ನೇಹಿತರು. 16ರ ನಂತರ ಒಳಿತಿನಕಾಲ. ಆದರೆ ಪುತ್ರರೊಂದಿಗೆ ವಿವಾದ ಅಥವಾ ಆಪ್ತರಿಂದ ಬೇರ್ಪಡೆ. ಪ್ರಯಾಣ, ಪ್ರಯಾಸ ಸೂಚಿತ. ಕೆಟ್ಟ ಸಲಹೆಗಳ ಬಗ್ಗೆ ಎಚ್ಚರದಿಂದಿರುವುದು.

ಉತ್ತರಾ 2, 3, 4 ಪಾದದವರಿಗೆ 5ರ ಮಧ್ಯಾಹ್ನ, 6, 8ರ ಮಧ್ಯಾಹ್ನ, 9ರಬೆಳಗ್ಗೆ 15, 17, 22, 26,

ಹಸ್ತದವರಿಗೆ 9ರ ಮಧ್ಯಾಹ್ನ, 10ರ ಬೆಳಗ್ಗೆ, 16, 21, 23ರ ಬೆಳಗ್ಗೆ,

ಚಿತ್ತಾ 1,2 ಪಾದದವರಿಗೆ 6ರ ಮಧ್ಯಾಹ್ನ 7ರ ಬೆಳಗ್ಗೆ, 8ರ ಮಧ್ಯಾಹ್ನ 9ರ ಬೆಳಗ್ಗೆ 15, 17, 22, 26,

ಒಳಿತಿನ ದಿನಗಳು.

## ತುಲಾ :

ಈ ರಾಶಿಯವರ ಚಿಂತಾಕುಲರಾಗಿ ತಿಂಗಳು ಕಳೆಯುವರು. ಹೆಚ್ಚು ವೆಚ್ಚ, ಆಗಾಗ ಪ್ರಯಾಣ ಪ್ರಯಾಸ, ಹೊಟ್ಟೆನೋವು, ಆದರೆ ಯಶಸ್ಸು, ಗೌರವ, ವಸ್ತ್ರಲಾಭ.

( 40 ನೇ ಪುಟ ನೋಡಿ )

# ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಗಳು



ಬ್ರಹ್ಮೋತ್ಸವದ ಊಂಜಲ್ ಮಂಟಪದ ಹೂವಿನ ಅಲಂಕಾರ

ಬ್ರಹ್ಮನೇ ಆರಂಭಿಸಿದನೆಂದು ಪುರಾಣ ಪ್ರಸಿದ್ಧವಾಗಿರುವ ಶ್ರೀವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಗಳು ಪ್ರತಿ ವರ್ಷದಂತೆ ಈ ಬಾರಿಯೂ ವಿಶೇಷ ಸಂಭ್ರಮ ಉತ್ಸಾಹಗಳಿಂದ ತಿರುಮಲೆಯಲ್ಲಿ ನಡೆದವು. ನವರಾತ್ರಿಯೊಡನೆ ಕೂಡಿದ ಈ ಬಾರಿಯ ಬ್ರಹ್ಮೋತ್ಸವಗಳಲ್ಲಿ ಎಂದಿನಂತೆಯೇ ಭಾರತದ ಎಲ್ಲ ಮೂಲೆಗಳಿಂದಲೂ ಲಕ್ಷೋಪಲಕ್ಷ ಜನರು ತಿರುಮಲೆಯಲ್ಲಿ ಸೇರಿ ಸ್ವಾಮಿಸೇವೆ, ದರ್ಶನಗಳಲ್ಲಿ ಪಾಲುಗೊಂಡು ಆನಂದಿತರಾದರು.

29–9–81 ರಿಂದ 8–10–81 ರವರೆಗೆ ನಡೆದ ಈ ಬಾರಿಯ ಬ್ರಹ್ಮೋತ್ಸವಗಳಲ್ಲಿನ ಗರುಡ ಸೇವೆಯನ್ನು ಒಂದು ಲಕ್ಷಕ್ಕೂ ಮೀರಿದ ಜನ ದರ್ಶಿಸಿದರು. ಅಂತೆಯೇ ರಥೋತ್ಸವದ ದಿನವೂ ತಿರುಮಲೆಯ ರಥಬೀದಿಯಲ್ಲಿ ಲಕ್ಷಕ್ಕೂ ಮೀರಿದ ಜನ ನೆರೆದು ರಥದೊಡನೆ ಹೆಜ್ಜೆ ಹಾಕುತ್ತ ಭಕ್ತಿಯ ಆನಂದಗಾನದಲ್ಲಿ ನಿರತರಾಗಿದ್ದುದು ಕಂಡುಬಂದಿತು.

ಈ ಬಾರಿಯ ಬ್ರಹ್ಮೋತ್ಸವದಲ್ಲಿನ ಹಲವು ವಿಶೇಷಗಳೆಂದರೆ ಗಾಂಧೀಜಯಂತಿಯ ಆರ್ಷ ಸದಸ್ ಸಂಗೀತಸಭೆ, ಹೊಸದಾಗಿ ಆಸ್ಥಾನ ವಿದ್ವಾಂಸರಾದವರ ಸನ್ಮಾನ, ತಿರುಮಲೆಯಲ್ಲಿ ಮೊದಲಬಾರಿಗೆ ಆದ ಪುಷ್ಪ ಪ್ರದರ್ಶನ, ಶ್ರೀ ವೆಂಕಟೇಶ್ವರ ಪಂಚರತ್ನಮಾಲಾದ ಐದನೆಯ ಹಾಗೂ ಕಡೆಯ ಎಲ್. ಪಿ. ಯ ಬಿಡುಗಡೆ, ಪುಸ್ತಕ ಪ್ರಕಟನೆ ಮೊದಲಾದವು ಎಂದು ಹೇಳಬೇಕು.

ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿ ದಿನವೂ ವಿದ್ವಾಂಸ, ಗಾಯಕರಿಂದ ಸಂಗೀತ, ಉಪನ್ಯಾಸ, ಹರಿಕಥೆಗಳಾಗುವುದು ವಾಡಿಕೆ. ಈ ಬಾರಿಯ ಗಾಂಧೀ ಜಯಂತಿಯಂದು ಅನ್ನಮಾಚಾರ್ಯ ಪ್ರಾಜೆಕ್ಟ್‌ನ ಕಲಾವಿದರು ಅನ್ನಮಯ್ಯನ ಅಸ್ಪೃಶ್ಯತಾ ವಿರೋಧಿ ಕೃತಿಗಳನ್ನು ಹಾಡಿ ತಿರುಮಲೆಯಲ್ಲಿ ಅಂದಿನ ಯಾತ್ರಿಕರ ಮೆಚ್ಚುಗೆಗಳಿಸಿದರು. ಈ ಕಾರ್ಯಕ್ರಮವನ್ನು ಕಾರ್ಯ ನಿರ್ವಹಣಾಧಿಕಾರಿ ಪಿ. ವಿ. ಆರ್. ಕೆ. ಪ್ರಸಾದರ ಸಲಹೆಗಳಂತೆ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿಯವರು (ಅನ್ನಮಾಚಾರ್ಯ ಪ್ರಾಜೆಕ್ಟ್ ವಿಶೇಷಾಧಿಕಾರಿ) ಸಂಯೋಜಿಸಿದ್ದರು.

ತಿರುಮಲೆಯ ಶಂಖುಮಿಟ್ಟು ಪ್ರದೇಶದ ವಿಶಾಲ ಉದ್ಯಾನದಲ್ಲಿ ಫಲಪುಷ್ಪ ಪ್ರದರ್ಶನವನ್ನು ತಿ. ತಿ. ದೇ. ಗಳ ಉದ್ಯಾನವನ ಇಲಾಖೆಯವರು ಏರ್ಪಡಿಸಿದ್ದರು. ಪಿ. ವಿ. ಆರ್. ಕೆ. ಪ್ರಸಾದರಿಂದ ಉದ್ಘಾಟಿತವಾದ ಈ ಪ್ರದರ್ಶನದಲ್ಲಿ ಸಾವಿರದ ಐದು ನೂರಕ್ಕೂ ಮೀರಿದ ವಿವಿಧ ಸಸ್ಯ, ಪುಷ್ಪಗಳೂ, ನಾನೂರಕ್ಕೂ ಮೀರಿದ ಕ್ರೋಟನ್‌ಗಳೂ ಪ್ರದರ್ಶನಗೊಂಡವು. ಬ್ರಹ್ಮೋತ್ಸವಕ್ಕೆ ಬಂದ ಯಾತ್ರಿಕರನ್ನು ಗುಡಿಯ ದಾರಿಯಲ್ಲೇ ಸುಗಂಧದಿಂದ ಕೂಡಿದ ವಾತಾವರಣವೇ ಆಹ್ವಾನಿಸುತ್ತಿರುವಂತೆ ನಾಲ್ಕೂ ದಿಕ್ಕಿನಲ್ಲೂ ಸುವಾಸನೆ ಹರಡಿದ್ದ ಈ ಪ್ರದರ್ಶನವನ್ನೂ ಇದರ ಹಿಂದಿನ ಕ್ರಿಯಾಶಾಲಿ ನಿರ್ದೇಶಕರಾಗಿ ಕೆಲಸಮಾಡಿದ ತಿ. ತಿ. ದೇ. ಉದ್ಯಾನವನ ಇಲಾಖಾಧಿಕಾರಿ ತಮ್ಮಣ್ಣ ಅವರನ್ನೂ ಯಾತ್ರಿಕಗಣ ಶ್ಲಾಘಿಸುತ್ತಿದ್ದುದು ಸಮಾನ್ಯದೃಶ್ಯವಾಗಿತ್ತು.




ಪುಷ್ಪಪ್ರದರ್ಶನದ ಉದ್ಘಾಟನೆ ಮಾಡುತ್ತ ಶ್ರೀ ಪಿ.ವಿ.ಆರ್.ಕೆ. ಪ್ರಸಾದ್. ಬಲಗಡೆಯಲ್ಲಿ ತಿ.ತಿ.ದೇ. ಉಪವನ ವಿಭಾಗಾಧಿಕಾರಿ ಶ್ರೀ ತಮ್ಮಣ್ಣ

ಅಕ್ಟೋಬರ್ ಆರರಂದು ಆಂಧ್ರ ಪ್ರದೇಶದ ಮುಖ್ಯಮಂತ್ರಿ ಶ್ರೀ ಅಂಜಯ್ಯನವರು ತಿರುಮಲೆಗೆ ಆಗಮಿಸಿದ್ದರು. ದೇವಾದಾಯ ಇಲಾಖಾ ಮಂತ್ರಿ ಶ್ರೀ ಪಿ. ವಿ. ಚೌದರಿಯವರ ಅಧ್ಯಕ್ಷತೆಯಲ್ಲಿ ನಡೆದ ಅರ್ಷ ಸದಸ್ ಕಾರ್ಯಕ್ರಮದಲ್ಲಿ ಅವರು ತಿ. ತಿ. ದೇ ಆಸ್ಥಾನ ವಿದ್ವಾಂಸರನ್ನು ಸನ್ಮಾನಿಸಿದರು. ಸನ್ಮಾನಿತ ವಿದ್ವಾಂಸರೆಂದರೆ ಅನ್ಮುಲ ವಿಶ್ವನಾಥ ಭಾಗವತರ್, ಪೆಪ್ಪಿಂಟೆ ಸತ್ಯನಾರಾಯಣ, ಅರಿಪಿರಾಲ ಸತ್ಯನಾರಾಯಣ ಹಾಗೂ ಡಿ. ಪಶುಪತಿ. (ತಿ. ತಿ. ದೇ. ಸಂಗೀತ ಕಲಾಶಾಲೆಯ ಪ್ರಿನ್ಸಿಪಾಲ್) ಶ್ರೀಮತಿ ಎಂ. ಎಸ್. ಸುಬ್ಬುಲಕ್ಷ್ಮಿ ಅವರು ಹಾಡಿದ, ಅನ್ನಮಾಚಾರ್ಯ ಕೃತಿಗಳ ಶ್ರೀ ವೆಂಕಟೇಶ್ವರ ಪಂಚರತ್ನ ಮಾಲೆಯ ಐದನೆಯ ಎಲ್. ಪಿ. ಯನ್ನು ಬಿಡುಗಡೆ ಮಾಡಿದ ಮುಖ್ಯಮಂತ್ರಿಗಳು ಅದರ ಪ್ರಥಮ ಪ್ರತಿಯನ್ನು ತಿ. ತಿ. ದೇ. ಕಾರ್ಯನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ ಅವರಿಗೆ ನೀಡಿ, ಸಂಗೀತಗಾರ್ತಿಯನ್ನು ಸನ್ಮಾನಿಸಿದರು. ಡಾ॥ ರಮೇಶನ್ ಅವರು ಬರೆದ ಆಂಗ್ಲ ಕೃತಿ 'ತಿರುಮಲೆಯ ಇತಿಹಾಸ'ವನ್ನೂ ಒಳಗೊಂಡಂತೆ ಐದು ಪುಸ್ತಕಗಳನ್ನೂ ಬಿಡುಗಡೆ ಮಾಡಲಾಯಿತು. ಅಧ್ಯಕ್ಷ ಪೀಠದಿಂದ ಶ್ರೀ. ಪಿ. ವಿ. ಚೌದರಿ ಅವರು ತಿ. ತಿ. ದೇವಸ್ಥಾನಗಳ ಧರ್ಮ ಪ್ರಸಾರ ಕಾರ್ಯವನ್ನು ಪ್ರಶಂಸಿಸುತ್ತ, ಜನತೆಯ ಪ್ರತಿಕ್ರಿಯೆಯೂ ಈ ದಿಕ್ಕಿನಲ್ಲಿ ಶ್ಲಾಘ್ಯಾರ್ಹ ರೀತಿಯಲ್ಲಿದ್ದು, ಮತ್ತೂ ಹೆಚ್ಚು ಪ್ರೋತ್ಸಾಹದಾಯಕವಾಗಲಿ ಎಂದು ಹಾರೈಸಿದರು.

ಇದೇ ಸಭೆಯಲ್ಲಿ ಹಿಂದೂ ಧರ್ಮ ರಕ್ಷಣ ಸಂಸ್ಥೆಯವರ. 1981 ರ ಜನವರಿಯಲ್ಲಿ ಏರ್ಪಡಿಸಿದ್ದ ಸಂಸ್ಕೃತಿ ಪರಿಚಯ ಪರೀಕ್ಷೆಗಳಲ್ಲಿನ ರ್‍ಯಾಂಕ್ ವಿಜೇತರಿಗೆ ಶ್ರೀ ವೆಂಕಟೇಶ್ವರಸ್ವಾಮಿ ಪದಕಗಳನ್ನು ಬಹೂಕರಿಸಲಾಯಿತು. (ಈ ಬಾರಿಯ ಪರೀಕ್ಷೆಗಳು ಡಿಸೆಂಬರ್–ಜನವರಿಯಲ್ಲಿ ಆಂಧ್ರ ಪ್ರದೇಶಾದ್ಯಂತ ನಡೆಯುವುವು).



ಶ್ರೀ ವೆಂಕಟೇಶ್ವರ ಪಂಚರತ್ನಮಾಲೆಯ 5ನೆಯ ಎಲ್.ಪಿ. ಯನ್ನು ಮುಖ್ಯಮಂತ್ರಿ ಅಂಜಯ್ಯನವರಿಂದ ಸ್ವೀಕರಿಸುತ್ತಿರುವ ತಿ.ತಿ.ದೇ. ಕಾರ್ಯನಿರ್ವಾಹಕ ಮಂಡಳಿಯ ಅಧ್ಯಕ್ಷ ಶ್ರೀ ಬಿ. ನಾಗಿರೆಡ್ಡಿ ಅವರು

ತಿರುಪತಿಯ ಕಪಿಲ ತೀರ್ಥದ ಬಳಿಯಲ್ಲಿ ಹೊಸದಾದ ಬೃಹತ್ ಬಸವ ವಿಗ್ರಹವನ್ನು ಅನಾವರಣಗೊಳಿಸಿದ ಮುಖ್ಯಮಂತ್ರಿಯವರು, ಅಲಿಪಿರಿಯ ಬಳಿಯಲ್ಲಿ ಕಾಲುಹಾದಿಯಿಂದ ಬೆಟ್ಟವನ್ನೇರುವ ಸ್ಥಳದಲ್ಲಿ ಯಾತ್ರಿಕರ ವಿಶ್ರಾಂತಿ ಗೃಹದ ಶಂಕುಸ್ಥಾಪನೆಯನ್ನು ಮಾಡಿದರು.

ಬ್ರಹ್ಮೋತ್ಸವದ ಒಟ್ಟು ಹತ್ತು ದಿನಗಳಲ್ಲಿ ದೇವಸ್ಥಾನದ ಆದಾಯ (ಹುಂಡಿ ಕಾಣಿಕೆ, ಪ್ರಸಾದಗಳ ಮಾರಾಟ, ವಿಶೇಷ ಪ್ರವೇಶದ ಟಿಕೆಟ್) 50 ಲಕ್ಷವೆಂದು ವರದಿಯಾಗಿದೆ. ಇದು ಬ್ರಹ್ಮೋತ್ಸವ ಕಾಲದಲ್ಲಿನ ಅತಿಹೆಚ್ಚು ಮೊತ್ತವಾಗಿದೆ.

## ರ್‍ಯಾಂಕ್ ವಿಜೇತರು

1981 ರ ಜನರಿಗೆ 18 ರಂದು ನಡೆದ ಸಂಸ್ಕೃತಿ ಪರಿಚಯ ಪರೀಕ್ಷೆಗಳಲ್ಲಿ ರ್‍ಯಾಂಕ್ ವಿಜೇತರಾಗಿ ಈ ಬ್ರಹ್ಮೋತ್ಸವಗಳಲ್ಲಿ ಪದಕ ಬಹುಮಾನ ಪಡೆದ ವಿದ್ಯಾರ್ಥಿಗಳ ಹೆಸರುಗಳು ಈ ರೀತಿಯಿವೆ.

ಆರ್. ಎನ್. ಎಸ್. ಶೈಲೇಶ್ವರಿ (ಪ್ರಥಮ) ಪೂರ್ವಗೋದಾವರಿ ಜಿಲ್ಲೆ, 84%

ಬಿ. ಉಷಾರಾಣಿ (ದ್ವಿತೀಯ) ಗುಂಟೂರು ಜಿಲ್ಲೆ, 83%.

ಕೆ. ಕೃಷ್ಣಮೂರ್ತಿ (ತೃತೀಯ) ಅನಂತಪುರ ಜಿಲ್ಲೆ, 82%.

## ತಿರುಪತಿಯಲ್ಲಿ ಸಾಂಸ್ಕೃತಿಕೋತ್ಸವ

ಬ್ರಹ್ಮೋತ್ಸವಗಳ ಅಂಗವಾಗಿ ತಿರುಪತಿಯಲ್ಲಿ ಪುರಸಭಾಧ್ಯಕ್ಷ ಶ್ರೀ ಗುರುವಾರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ಸಾಂಸ್ಕೃತಿಕೋತ್ಸವಗಳು ನಡೆದವು.

ಆಂಧ್ರಪ್ರದೇಶ ಸಂಸ್ಕೃತಿ ಅಭಿವೃದ್ಧಿ ಇಲಾಖಾ ಮಂತ್ರಿ ಶ್ರೀ ಭಾಟಂ ಶ್ರೀರಾಮಮೂರ್ತಿ ಅವರು ತಿರುಪತಿಯಲ್ಲಿನ ಬ್ರಹ್ಮೋತ್ಸವ ಸಮಯದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಇಡೀ ರಾಜ್ಯದಲ್ಲೇ ಹರಡುವಂತೆ ಮಾಡಲು ಪ್ರಯತ್ನಿಸಲಾಗುವುದೆಂದೂ, ಈ ಕಾರ್ಯದಲ್ಲಿ ತಮಗೆ ತಿ. ತಿ. ದೇವಸ್ಥಾನಗಳ ಕಾರ್ಯರೀತಿಯೇ ಆದರ್ಶವೆಂದೂ ನುಡಿದರು.



ಗಾನಕೋಕಿಲೆ ಶ್ರೀಮತಿ ಎಮ್. ಎಸ್. ಸುಬ್ಬುಲಕ್ಷ್ಮಿಯವರ ಗಾಯನ

(37 ನೇ ಪುಟದಿಂದ)

ಚಿತ್ತಾ 3, 4 ಪಾದಗಳವರಿಗೆ 1, 8ರ ಮಧ್ಯಾಹ್ನ 9ರ ಬೆಳಗ್ಗೆ, 10ರ ಮಧ್ಯಾಹ್ನ, 17, 19, 24, 28ರ ಮಧ್ಯಾಹ್ನ 29ರ ಬೆಳಗ್ಗೆ

ಸ್ವಾತಿಯವರಿಗೆ 9ರ ಮಧ್ಯಾಹ್ನ 10ರ ಬೆಳಗ್ಗೆ, 16ರ ಮಧ್ಯಾಹ್ನ, 29, 25

ವಿಶಾಖ 1, 2, 3, ಪಾದದವರಿಗೆ 1, 8ರ ಮಧ್ಯಾಹ್ನ. 9ರ ಬೆಳಗ್ಗೆ, 10ರ ಮಧ್ಯಾಹ್ನ 11ರ ಬೆಳಗ್ಗೆ, 12ರ ಬೆಳಗ್ಗೆ, 17, 24 ಒಳಿತಿನ ದಿನಗಳು.

## ವೃಶ್ಚಿಕ :

ಧನಲಾಭ, ಯಶಸ್ಸು, ಒಳ್ಳೆಯ ಸ್ನೇಹಿತರು. ಪ್ರಣಯಭಾವ ಇದ್ದರೂ ಪಾಪಪ್ರವರ್ತನೆ. 16ರ ನಂತರ ಪ್ರಯಾಣ, ಪ್ರಯಾಸ, ಅಥವಾ ಹೊಟ್ಟೆನೋವು. ಒಟ್ಟಿನಲ್ಲಿ ತಿಂಗಳು ಸಂತಸದಿಂದ ಕಳೆಯುತ್ತದೆ.

ವಿಶಾಖ 4ನೇ ಪಾದದವರಿಗೆ 5ಮಧ್ಯಾಹ್ನ, 10, 11ರ ಬೆಳಗ್ಗೆ, 12, 21, 23, 24, 26

ಅನುರಾಧಾದವರಿಗೆ 4ರ ಮಧ್ಯಾಹ್ನ, 9, 10ರಬೆಳಗ್ಗೆ, 13, 20, 22, 24

ಜ್ಯೇಷ್ಠಾದವರಿಗೆ 13ರ ಮಧ್ಯಾಹ್ನ, 5, 10, 12, 21, 26

ಒಳಿತಿನ ದಿನಗಳು.

## ಧನುಸ್ಸು :

ಶೃಂಗಾರಭಾವ, ಧನಲಾಭ, ಸುಸ್ನೇಹ. 16ರ ಮೊದಲು ಒಳಿತಿನಕಾಲ, ಗೌರವದ ಬಗ್ಗೆ ತೃಪ್ತಭಾವ.

ಮೂಲಾದವರಿಗೆ 2, 6ರ ಮಧ್ಯಾಹ್ನ, 7ರ ಬೆಳಗ್ಗೆ, 13, 22, 24

ಪೂರ್ವಾಷಾಢದವರಿಗೆ 1, 5ರ ಮಧ್ಯಾಹ್ನ 6ರ ಬೆಳಗ್ಗೆ, 14, 16, 21, 23, 25

ಉತ್ತರಾಷಾಢ 1ನೇ ಪಾದದವರಿಗೆ 6ರ ಮಧ್ಯಾಹ್ನ, 7ರ ಬೆಳಗ್ಗೆ, 13, 15, 22, 24, 28ರ ಮಧ್ಯಾಹ್ನ 29ರ ಬೆಳಗ್ಗೆ

ಒಳಿತಿನ ದಿನಗಳು.

## ಮಕರ :

ಅಧಾರ್ಮಿಕ ಪ್ರವರ್ತನೆ ಸೂಚಿತ. ವಿವಾದ, ಅನಗತ್ಯ ವೆಚ್ಚಗಳುಂಟು. 16ರ ನಂತರ ಧನಾಗಮ, ಯಶಸ್ಸು ದೇಹಘಾತವಾಗಬಹುದು. ವಸ್ತ್ರಲಾಭ.

ಉತ್ತರಾಷಾಢ 2, 3, 4, ಪಾದಗಳವರಿಗೆ 4ರ ಮಧ್ಯಾಹ್ನ, 5ರ ಬೆಳಗ್ಗೆ 8ರ ಮಧ್ಯಾಹ್ನ 9ರ ಬೆಳಗ್ಗೆ 15, 17, 24, 28ರ ಮಧ್ಯಾಹ್ನ 29ರ ಬೆಳಗ್ಗೆ

ಶ್ರವಣದವರಿಗೆ 5ರ ಮಧ್ಯಾಹ್ನ 6ರ ಬೆಳಗ್ಗೆ, 9ರ ಮಧ್ಯಾಹ್ನ, 10ರ ಬೆಳಗ್ಗೆ 14ರ ಮಧ್ಯಾಹ್ನ 16, 23ರ ಮಧ್ಯಾಹ್ನ, 25

ಧನಿಷ್ಠಾ 1, 2 ಪಾದದವರಿಗೆ 5ರ ಮಧ್ಯಾಹ್ನ, 8ರ ಮಧ್ಯಾಹ್ನ, 9ರಬೆಳಗ್ಗೆ, 15, 17, 24, 26

## ಕುಂಭ :

ಧನಲಾಭ, ಸುಸ್ನೇಹ. ಆದರೆ ಹೊಟ್ಟೆ ಅಥವಾ ಕಣ್ಣುನೋವು. ಆಪ್ತರಿಂದ ಬೇರ್ಪಡೆ. 16ರ ನಂತರ ಒಳಿತಿನಕಾಲ.

ಧನಿಷ್ಠಾ 3, 4 ಪಾದಗಳವರಿಗೆ 1, 6ರ ಮಧ್ಯಾಹ್ನ, 7ರ ಬೆಳಗ್ಗೆ, 10ರ ಮಧ್ಯಾಹ್ನ 11ರ ಬೆಳಗ್ಗೆ, 17, 21, 24

ಶತಭಿಷಾದವರಿಗೆ 2, 7ರ ಮಧ್ಯಾಹ್ನ, 8ರ ಬೆಳಗ್ಗೆ 13, 16, 20, 30

ಪೂರ್ವಾಭಾದ್ರ 1, 2, 3 ಪಾದದವರಿಗೆ 1, 6ರ ಮಧ್ಯಾಹ್ನ 7ರ ಬೆಳಗ್ಗೆ, 10ರ ಮಧ್ಯಾಹ್ನ 11ರ ಬೆಳಗ್ಗೆ 17, 19, 26 29

ಒಳಿತಿನ ದಿನಗಳು.

## ಮೀನ :

ಆಗಾಗ ಪ್ರಯಾಣ ಹಾಗೂ ವಿವಾದ ಮೊದಲ 15 ದಿನಗಳಲ್ಲಿ ತುಸು ಅನಾರೋಗ್ಯ ಅಥವಾ ಹೆಂಡತಿಯ ಅತೃಪ್ತಿಯೂ, ಎರಡನೆಯ 15 ದಿನಗಳಲ್ಲಿ ಅಡ್ಡಿ ಆತಂಕಗಳೂ ಸೂಚಿತ. ಆದರೂ ಧನಲಾಭ, ಯಶಸ್ಸು, ವಸ್ತ್ರಲಾಭ ಸೂಚಿತ.

ಪೂರ್ವಾಭಾದ್ರ 4 ಪಾದದವರಿಗೆ 5ರ ಮಧ್ಯಾಹ್ನ 6ರಬೆಳಗ್ಗೆ 8ರ ಮಧ್ಯಾಹ್ನ 9ರ ಮಧ್ಯಾಹ್ನ 9ರ ಬೆಳಗ್ಗೆ 14, 21, 23, 28ರ ಬೆಳಗ್ಗೆ, 29ರ ಬೆಳಗ್ಗೆ

ಒಳಿತಿನ ದಿನಗಳು.

---

ಸೆಪ್ಟೆಂಬರ್ 1981 ನೇ ಸಪ್ತಗಿರಿ ಸಂಚಿಕೆಯಲ್ಲಿ ಶ್ರೀ ಪ್ರಹ್ಲಾದಾಚಾರ್ಯ ಜೋಶಿಯವರು ಬರೆದ ಶ್ರೀ ವರದೇಶದಾಸರು ಲೇಖನ ಶ್ರೀ ವರದೇಂದ್ರರು ಎಂಬ ಶೀರ್ಷಿಕೆಯಲ್ಲಿ ಮುದ್ರಿತವಾಗಿದೆ. ತಪ್ಪನ್ನು ತಿದ್ದಿಕೊಳ್ಳಲು ಕೋರಲಾಗಿದೆ.

---

ಮುಂದಿನ ಸಂಚಿಕೆಯಲ್ಲಿ;

**ಸಪ್ತಗಿರಿ — ಡಿಸೆಂಬರ್ ೧೯೮೧**

**ಪರತ್ವವೂ ಸೌಲಭ್ಯವೂ** — ತಿ.ಅ. ಸಂಪತ್ಕುಮಾರಾಚಾರ್ಯ.

**ನಂದಿಗ್ರಾಮ** — ಕೆ. ಆರ್. ನರಸಿಂಹ,

**ಹೆಳವನಕಟ್ಟೆ ಗಿರಿಯಮ್ಮ** — ಜಯಸಿಂಹ

**ಶ್ರೀ ವೆಂಕಟೇಶ್ವರ ಸ್ತೋತ್ರ** — ಜಿ. ಚೆನ್ನಯ್ಯ

**ಶ್ರೀ ವರದೇಂದ್ರರು** — ಕೆ. ಅಪ್ಪಣಾಚಾರ್ಯ

**ಮಂಕುತಿಮ್ಮನ ಕಗ್ಗ** — ಚಿ. ನ. ಕೃಷ್ಣಮೂರ್ತಿ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

**ಬೆಲೆ: ರೂ. 1-00 ಮಾತ್ರ**

Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

ವಿಶೇಷ ಪ್ರವೇಶ — ರೂ 25–00
(ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ)

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2. | ಅಭಿಷೇಕ* | ರೂ 500 |
| 3. | ಗಂಬುರ* | ರೂ 300 |
| 4. | ಪುನುಗು* | ರೂ 200 |
| 5. | ಜಾಫ್ರಾ* | ರೂ 100 |
| 6. | ಕಸ್ತೂರಿ* | ರೂ 100 |
| 7. | ಸಹಸ್ರಕಲಶಾಭಿಷೇಕ | ರೂ 3000 |
| 8. | ತಿರುಪ್ಪಾವಡಾ[2] | ರೂ 6000 |
| 9. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 10. | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 11. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.
* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.
2. ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ
ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ.ಸಿ. ಒಳಗಿನ ಕಾಟೇಜುಗಳು | ,, | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮೂಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ.ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳ ಕೋಣೆ | ರೂ 12–00 |
| ನಾಲ್ಕು ,, | ರೂ 15–00 |
| ಒಂದು ,, | ರೂ 10–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 40–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 16–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.

## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.

## ದೃಢವಾದ ತಾತ್ವಿಕ ತಳಹದಿಯುನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.

## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

### ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.



ಓಂ ಶ್ರೀ ವೆಂಕಟೇಶಾಯ ನಮಃ

ಓಂ ನಮೋ ಭಗವತೇ ವಾಸುದೇವಾಯ

ಓಂ ನನೋ ನಾರಾಯಣಾಯ

ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ

ರಾಮ ರಾಮ ಹರೇ ಹರೇ

ಹರೇ ಕೃಷ್ಣ ಹರೇ ಕೃಷ್ಣ

ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.